

ಹರಿಭಜನೆ ಮಾಡೋ ನಿರಂತರ
ಪರಗತಿಗಿದು ನಿರ್ಧಾರ ನೋಡೋ

ಮೊದಲೆ ತೋರುತದೆ ಮಧುರ ವಿಷಯಸುಖ
ಕಡೆಯಲಿ ದುಃಖ ಅನೇಕ
ವೇದಶಾಸ್ತ್ರಗಳ ನೋಡಿದರೇನು
ಸಾಧನಕಿದು ನಿರ್ಧಾರ
ಸಾರವೋ ಬಹು ಸಂಸಾರ ವಿಮೋಚಕ
ಸೇರೋ ಹಯವದನನ್ನ

-ಶ್ರೀ ವಾದಿರಾಜರು

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ಆಲಯ
# ತಿರುಪತಿ

## ವಾರ್ಷಿಕ ಬ್ರಹ್ಮೋತ್ಸವಗಳು

### 23--5--96 ರಿಂದ 1--6--96 ವರೆಗೆ

| | | |
|---|---|---|
| 24-5-96 | ಶುಕ್ರವಾರ | ಧ್ವಜಾರೋಹಣ. |
| 28-5-96 | ಮಂಗಳವಾರ | ಗರುಡವಾಹನ. |
| 31-5-96 | ಶುಕ್ರವಾರ | ರಥೋತ್ಸವ. |
| 1-6-96 | ಶನಿವಾರ | ಚಕ್ರಸ್ನಾನ. |

ಸೂಚನೆ : ಬ್ರಹ್ಮೋತ್ಸವಗಳಲ್ಲಿ ಪ್ರತಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನೋತ್ಸವಗಳು ನಡೆಯುತ್ತವೆ. ಹರಿಕಥೆ, ಸಂಗೀತ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು.

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು

## ವಾರ್ಷಿಕ ಪ್ಲವೋತ್ಸವಗಳು

### 28--5--96 ರಿಂದ 1--6--96 ವರೆಗೆ

| | | |
|---|---|---|
| 28-5-96 | ಮಂಗಳವಾರ | ಶ್ರೀಕೃಷ್ಣಸ್ವಾಮಿ ಪ್ಲವೋತ್ಸವ. |
| 29-5-96 | ಬುಧವಾರ | ಶ್ರೀ ಸುಂದರ ರಾಜಸ್ವಾಮಿ ಪ್ಲವೋತ್ಸವ. |
| 30-5-96 | ಗುರುವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |
| 31-5-96 | ಶುಕ್ರವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |
| 1-6-96 | ಶನಿವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |

ಜ್ಯೇಷ್ಠಮಾಸದ ಪೂರ್ಣಿಮೆಯ ಆಚೀಚಿನ ದಿನಗಳಲ್ಲಿ ನಡೆಯುವ ಪ್ಲವೋತ್ಸವಗಳಲ್ಲಿ ತಿರುಚಾನೂರು ಪದ್ಮ ಸರೋವರ ನಯನಾನಂದಕರ, ಆತ್ಮತೃಪ್ತಿಕರ. ತಿರುಚಾನೂರು ತಿರುಪತಿಯಿಂದ ಬಸ್ ಮೂಲಕ ಹತ್ತು ನಿಮಿಷದ ಹಾದಿ.





ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ 4-00**

**ವಾರ್ಷಿಕ ಚಂದಾ 48-00**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ|||


**ಸಂಪುಟ -- 26 ಏಪ್ರಿಲ್ 1996 ಸಂಚಿಕೆ --11**


# ವಿಷಯಸೂಚಿ



ಮುಖ ಚಿತ್ರ : ತಿರುಮಲೆಯ ಹಾದಿಯಲ್ಲಿ ಅನ್ನಮಾಚಾರ್ಯ - ಚಿತ್ರ - ನಾರಾಯಣಗಿರಿ ದತ್ತು.

ಹಿಂಬದಿಯಲ್ಲಿ : ಕುಂಡಲೇಶ್ವರಂ - ಶ್ರೀ ಕುಂಡಲೇಶ್ವರಸ್ವಾಮಿ ಆಲಯ.

ಒಳಗಡೆ : 1) ತಿರುಮಲೆಯಲ್ಲಿ ಶ್ರೀರಾಮನವಮಿ ಅಭಿಷೇಕ.

2) ತಿರುಮಲೆಯಲ್ಲಿ ವಸಂತೋತ್ಸವ.






ಭಾರತೀಯ - ಸನಾತನ ಧರ್ಮದ - ಸಾಗರ ಸದೃಶ ತತ್ವಸಾರ ಸಾಗರದಷ್ಟೇ ಆಳವಾದದ್ದು. ವೇದದ ತಾಳಿಗೆಗಳೊಳಗಿದವು 'ಅವನನ್ನು' ಕುರಿತು ವಿವರಿಸುವಲ್ಲಿ ಎಂಬುದು ಕುಮಾರ ವ್ಯಾಸನ ಅಭಿಪ್ರಾಯವಾದರೂ, ಆ ಪ್ರಯತ್ನದಲ್ಲಿ ಅಂದಿನಿಂದ ಇಂದಿನವರೆಗೆ ಜಿಜ್ಞಾಸೆ ವಿಶ್ಲೇಷಣೆಗಳು ನಡೆದೇ ಇವೆ. ದೇರೆ ದೇರೆ ಕಾಲದಲ್ಲಿ ದೇರೆ ದೇರೆ ಹಿರಿಯರು ಅದೇ ಸತ್ಯವನ್ನು ಹಲವಾಗಿ ಕಂಡು ಹನ್ನೊಂದಾಗಿ ವಿವರಿಸಿದ್ದರೂ, ಅವೆಲ್ಲವುಗಳ ಗುರಿಯೂ ಗಮ್ಯವೂ ಒಂದೇ ಎಂಬುದು ಮನಗಾಣಬೇಕಾದ ಅಂಶ.

ಪ್ರಶ್ನೆ ಅವನನ್ನು ಕುರಿತ ಕಾಳಜಿ, ಜ್ಞಾನಪಿಪಾಸೆ. ಎಲ್ಲಿ ಕೇರಳದ ಕಾಲಟಿ, ಎಲ್ಲಿ ಕಾಶ್ಮೀರದ ಕಾಡುಗಳು, ಎಲ್ಲಿ ಉಡುಪಿ, ಎಲ್ಲಿ ಬದರಿ; ಎಲ್ಲಿ ಪೆರಂಬುದೂರು, ಎಲ್ಲಿ ಬೋಧಾಯನ ವೃತ್ತಿ. ಹೀಗೇ ಮುಂದುವರಿಸಬಹುದು ಈ ಎಲ್ಲೆಲ್ಲಿನ ಸಂಬಂಧದ ಪ್ರಶ್ನೆಯ ಸರಮಾಲೆಯನ್ನು. ಬೆಟ್ಟದ ನೆಲ್ಲಿಯನ್ನೂ, ಸಮುದ್ರದ ಉಪ್ಪನ್ನೂ ಬೆರೆಸಿ ಬೇರೆಯವರಿಗೆ ರುಚಿಯಾದ ಉಪ್ಪಿನಕಾಯಿ ನೀಡುವುದರಿಂದ ಅವರಾರಿಗೂ ಈಪತ್ರ ಯೋಜನವಿರಲಿಲ್ಲ ಎಂಬುದು ನಾವು ಇಂದು ಗುರುತಿಸಬೇಕು. ಕೃಷಿಕ ಬೀಜವನ್ನು ಬಿತ್ತುವುದು ಮುಂದಿನವರಿಗೆ ಪ್ರಯೋಜನವಾಗಲಿ ಎಂದು. ಈ ಆಧ್ಯಾತ್ಮಿಕ ಕೃಷಿಕರಾದರೊ ಮುಂದಿನ ಕಾಲಕ್ಕೆ ಪ್ರಯೋಜನವಾಗಲಿ ಎಂದು ವ್ಯವಸಾಯ ನಡೆಸಿದವರು. ಅದರಲ್ಲಿಯೇ ಮೋಕ್ಷ ಕಂಡವರು.

ರಾಮಾನುಜರನ್ನು ಲಕ್ಷ್ಮಣನ, ಶೇಷನ ಅವತಾರವೆಂದೂ ಗುರುತಿಸಲಾಗುತ್ತದೆ. ಅವರದು ವಿಶಿಷ್ಟವಾದ ವ್ಯಕ್ತಿತ್ವ. ತಮಗೆ ಪರೋಕ್ಷ ಗುರುಗಳಾದ ಯಾಮುನರ ಅಪೇಕ್ಷೆಗಳನ್ನು ಪೂರೈಸಿದ್ದೇ ಅಲ್ಲದೆ, ತಮಗಿಂತ ಮೊದಲು ಆಗಿ ಹೋದ ಗೋದಾದೇವಿಯ ಅಪೇಕ್ಷೆಯನ್ನೂ ಪೂರೈಸಿ ಗೋದಾಗ್ರಜರಾದವರು. ಇದೊಂದು ರೀತಿಯ ಆಧ್ಯಾತ್ಮಿಕ ನಿರಂತರತೆಯ ಅಂಶವಾದರೆ, ಅಂದಿನ ಸಮಾಜದ ಒಳಿತನ್ನು ಅಪೇಕ್ಷಿಸಿ ಆಲಯ ಗೋಪುರದ ಮೇಲಿನಿಂದ ಸರ್ವರಿಗೂ ಸುಲಭವಾದ ಮೋಕ್ಷಮಾರ್ಗವನ್ನು ಉದ್ಘೋಷಿಸುವಲ್ಲಿ ಅವರ ಸಮಕಾಲೀನ ಸಮಾಜಸಂಗ್ರಹದ ಕಾಳಜಿಯೂ ವ್ಯಕ್ತವಾಗುತ್ತದೆ. ಶ್ರೀರಂಗಗದ್ಯ, ಶರಣಾಗತಿಗದ್ಯ ಮೊದಲಾದವುಗಳಲ್ಲಿ ಅವರ ಭವಿಷ್ಯಕ್ಕೆ ಬುನಾದಿ ಹಾಕುವ ಪ್ರಯತ್ನಗಳು ಸ್ಫುಟವಾಗಿವೆ.

ಇಷ್ಟಾದರೂ ಅವರ ವಿನಯ, ಸಹನೆ, ಅಹಂಕಾರ ನಿರಸನಗಳು ಅವರ ಸಾಧನೆಗಳನ್ನು ಹೆಚ್ಚಿನ ಬೆಳಕಿಗೆ ಒಡ್ಡುವ ವಿಷಯಗಳು ಎನ್ನಲು ಅಡ್ಡಿಯಿಲ್ಲ. ಪೂಜ್ಯ ಡಿ.ವಿ. ಗುಂಡಪ್ಪನವರು ಒಂದು ಪದ್ಯದಲ್ಲಿ ಅವರ ಹಿರಿಮೆಯನ್ನು ಸೆರೆಹಿಡಿದಿದ್ದಾರೆ.

ರಾಮಾನುಜರ್ ಮನೆಯ ಹೊರನಿಂತ ಶಿಷ್ಯನನು
ನಾಮವೇನೆನ್ನಲಾ ನಾನೆಂದನಾತಂ
ಬಾ ಮಗುವೆ ನಾಂ ಸತ್ತಮೇಲೆ ಬರ್ಪುದೆಂ
ಬಾ ಮುನಿಯ ಮಾತ ನೆನೆ ಮರುಳ ಮುನಿಯ

'ನಾನು' ಸಾಯದೆ ಯಾರಿಗೂ ಬರವಿಲ್ಲ. ಗುರುಸನ್ನಿಧಿಗೆ ಬರುವ ಮುನ್ನ ಅಪಂಕಾರ ಸಿರಸನವಾಗಿರಬೇಕು ಎಂಬುದನ್ನು ಇನ್ನೂ ಚೆನ್ನಾಗಿ ಹೇಳಲು ಸಾಧ್ಯವೇ! [ನಾನು ಹೋದರೆ ಹೋಗಬಹುದು ಎಂಬ ಕನಕವಾಸರ ಮಾತೂ ಇದೆ ಎಂಬುಮು ದೇರೆ ಮಾತು. ಜೊತೆಗೇ ಫಲಸ್ವರೂಪವಾದ ಗುರುವಿನ ಗುಲಾಮನಾಗದನಕ ದೊರಕದಣ್ಣ ಮುಕುತಿ - ಪುರಂದರದಾಸರು] ಆವರೆ ಇವೆಲ್ಲ ಭಾವಸತ್ಯವಾಗಬೇಕು. ಅದಕ್ಕೆ ಶರಣಾಗತಿ ಗದ್ಯವೇ ಶರಣು. ಹಾಗಾದಾಗ ನಮ್ಮ ಬದುಕೂ ಶಾಂತಿ, ಸಮತೆಗಳಿಂದ ಚಿತ್ತವಿಕಾರವಿಲ್ಲದ ನಡೆವೀತು.

'ರಾಮಾನುಜಾಚಾರ್ಯಯೋಗಿ
ಮನೋಭೀಷ್ಟಮನಿತ್ತು
ಪಾಲಿಸುಗಜಸ್ರಂ ಸಜ್ಜನ ವ್ರಾತಮಂ'

# ಯಾದವಗಿರಿ

---ಜಗ್ಗು ನರಸಿಂಹಾಚಾರ್ಯ.

(ಹಿಂದಿನ ಸಂಚಿಕೆಯಿಂದ)

ನಾಲ್ಕು ವೇದಗಳನ್ನೂ ಓದಿದ್ದರಿಂದ 'ಚತುರ್ವೇದಿ' ಎಂದೂ, ಖ್ಯಾತಿಗೋಸ್ಕರ ಬಂದವರಿಗೆಲ್ಲಾ ಅನ್ನ ಹಾಕುತ್ತಿದ್ದುದರಿಂದ, 'ಸರ್ವಾತಿಥ್ಯ' ಎಂದೂ ಹೆಸರುಳ್ಳವನಾಗಿ, ದ್ರವ್ಯಾರ್ಜನದಲ್ಲಿ ಚತುರನಾದುದರಿಂದ, ದಂಭಾರ್ಥವಾಗಿ ಯಜ್ಞ ಮಾಡುವವನಾಗಿಯೂ, ಶುದ್ಧ ನಾಸ್ತಿಕನಾಗಿಯೂ ಇದ್ದ ಒಬ್ಬ ರಾಜಪುರೋಹಿತನಿದ್ದನು. ಅವನು ತನ್ನಂತಿರುವ ನಾಲ್ಕು ಬ್ರಾಹ್ಮಣರನ್ನಿಟ್ಟುಕೊಂಡು ಶ್ರಾದ್ಧವನ್ನು ಮಾಡುವ ಸನ್ನಾಹದಲ್ಲಿರುವಾಗ, ಯದುಗಿರಿವಾಸಿಯಾದ ಹರಿರಾತನೆಂಬ ಒಬ್ಬ ವೃದ್ಧ ಬ್ರಾಹ್ಮಣನು ತನ್ನ ಬಾಲಕನನ್ನೂ ಕರೆದುಕೊಂಡು ಮಾರ್ಗಶ್ರಮದಿಂದಲೂ ಹಸಿವು - ಬಾಯಾರಿಕೆಗಳಿಂದಲೂ ಬಹಳ ಕಂಗೆಟ್ಟು ಈ ಚತುರ್ವೇದಿಯ ದುರ್ಗುಣಗಳನ್ನು ತಿಳಿಯದೆ ಇವನ ಮನೆಗೆ ಬಂದನು.

ಈ ಹರಿರಾತನು ಆ ಚತುರ್ವೇದಿಗೆ ನಾರಾಯಣ ಶ್ರೀಪಾದ ತುಲಸಿಯನ್ನು ಕೊಡಲು "ನಮ್ಮ ಮನೆಯಲ್ಲೇ ಬೇಕಾದಷ್ಟು ತುಲಸೀ ಗಿಡಗಳಿವೆ. ಹಾಗಿಪ್ಪವಿದ್ದಲ್ಲಿ ಅನುಪನೀತನಾದ ಈ ನನ್ನ ಹುಡುಗನ ಕೈಯಲ್ಲಿ ಕೊಡು" ಎಂತಲೂ, "ಬಹಳ ಹಸಿದಿರುವ ಈ ನನ್ನ ಹುಡುಗನಿಗೆ ಸ್ವಲ್ಪ ಅನ್ನವನ್ನು ಕೊಡು" ಎನ್ನಲು, "ನಮ್ಮ ಮನೆಯಲ್ಲಿ ಶ್ರಾದ್ಧವೆಂಬುದನ್ನು ಕಾಣೆಯಾ? ನೀನು ಬ್ರಾಹ್ಮಣನಲ್ಲವೇ?" ಎಂತಲೂ, "ಸ್ವಲ್ಪ ಅಕ್ಕಿಯನ್ನಾದರೂ ಕೊಡಿಸು" ಎನ್ನಲು, "ಏತಕ್ಕೆ ಪಿಶಾಚದಂತೆ ಬಾಧಿಸುವೆ" ಎಂತಲೂ, ಆ ಹುಡುಗನು ಕಾಲುಸೋತು ಯತ್ನವಿಲ್ಲವೆ ಅಂಗಳದಲ್ಲಿ ಕುಳಿತುಕೊಳ್ಳಲು, "ಯಾರೋ ಅದು? ಕತ್ತು ಹಿಡಿದು ಆಚೆಗೆ ತಳ್ಳಿ ಕದವನ್ನು ಹಚ್ಚು" ಎಂತಲೂ ಆ ಚತುರ್ವೇದಿಯು ಹೇಳಿ ತನ್ನ ಮಗನ ಕೈಯಿಂದ ತಳ್ಳಿಸಿ ಕದ ಹಾಕಿಸುವಾಗ ಕದವು ಆ ಹುಡುಗನ ಕಾಲಿಗೆ ತಗಲಿ ಹುಡುಗನು ಕೆಳಗೆ ಬೀಳುವಾಗ ಅಳುತ್ತಾ "ನಾಶವಾಗಿ ಹೋಗಲಿ" ಎಂದು ಶಪಿಸಿದನು.

ಆ ಹರಿರಾತಕನೆಂಬ ಬ್ರಾಹ್ಮಣನು "ಹೀಗೆ ಶಪಿಸಬಾರದಪ್ಪಾ" ಎಂದು ತನ್ನ ಮಗನಿಗೆ ಬುದ್ಧಿವಾದ ಹೇಳಿ ಏಳಾವರ್ತಿ ಗೋವಿಂದನಾಮೋಚ್ಚಾರಣವನ್ನು ಮಾಡಿ ಆ ಗ್ರಾಮವನ್ನು ಬಿಟ್ಟು ಮತ್ತೊಂದು ಗ್ರಾಮಕ್ಕಾಗಿ ತನ್ನ ಮಗನೊಡನೆ ಪ್ರಯಾಣ ಹೊರಡಲು ಮಾರ್ಗದಲ್ಲಿ ಉಪಾದಾನ ಮಾಡುತ್ತಿದ್ದ ಹನ್ನೆರಡು ಗಂಡು ಮಕ್ಕಳುಳ್ಳ ವಿಷ್ಣುರಾತನೆಂಬ ಒಬ್ಬ ದರಿದ್ರ ಬ್ರಾಹ್ಮಣನು ಇವರಿಬ್ಬರ ದುರ್ದೆಶೆಯನ್ನು ನೋಡಿ ಸಹಿಸಲಾರದೆ ತನ್ನ ಮನೆಗೆ ಕರೆದುಕೊಂಡು ಹೋಗಿ ತನ್ನ ಹೆಂಡತಿಯಿಂದ ಅಡಿಗೆ ಮಾಡಿಸಿ ದೇವರಿಗೆ ನಿವೇದನ ಮಾಡಿ ಬಹಳ ಸಂತೋಷದಿಂದ ಊಟ ಮಾಡಿಸಿದನು.



ಈ ಹರಿರಾತನು ತನ್ನ ಮಗನೊಡನೆ ಊಟಕ್ಕೆ ಕುಳಿತಿರಲು ಒಬ್ಬ ತ್ರಿದಂಡ ಸನ್ಯಾಸಿಯೂ, ಅವನ ನಾಲ್ವರು ಶಿಷ್ಯರೂ ಸಹ ಬಂದು ಕುಳಿತುಕೊಂಡರು. ಏಳೂ ಜನರೂ ಊಟ ಮಾಡಿದರು. ಅಂದಿನಿಂದ ಆ ಬಡಬ್ರಾಹ್ಮಣನ ಮನೆಯ ಪಾತ್ರೆಗಳೆಲ್ಲಾ ಭಕ್ಷ್ಯ ಭೋಜ್ಯಾದಿಗಳಿಂದ ಅಕ್ಷಯಗಳಾದುವು. ಅವರು ಊಟ ಮಾಡಿದ ಜಾಗದಲ್ಲಿ ಬೇಕಾದಷ್ಟು ನಿಧಿಗಳು ದೊರಕಿದವು. ಆ ಸನ್ಯಾಸಿಯು ದತ್ತಾತ್ರೇಯ ಅವತಾರಿಯಾದ ವಿಷ್ಣುವು. ಆ ಶಿಷ್ಯರು ನಾಲ್ಕು ವೇದಗಳು. ಆದುದರಿಂದ ಇವೆಲ್ಲವೂ ಉಂಟಾಯಿತು. ವಿಷ್ಣುವು ತನ್ನ ಭಕ್ತರ ಹಿಂದೆಯೇ ಯಾವಾಗಲೂ ಇದಾನೆಯಲ್ಲವೇ ? ಹೀಗೆ ಯಾದವಾದ್ರಿವಾಸಿಯಾದ ಹರಿರಾತನನ್ನು ಆರಾಧಿಸಿದ ವಿಷ್ಣುರಾತನಿಗೆ ಮಹದೈಶ್ವರ್ಯವುಂಟಾಯಿತು.

ಈ ಹರಿರಾತನನ್ನು ಮನೆಯಿಂದೋಡಿಸಿದ ಚತುರ್ವೇದಿಯ ಮನೆಯಲ್ಲೋ ಅಂದರೆ ನಿಮಂತ್ರಣದ ಬ್ರಾಹ್ಮಣರು ಅಗ್ರಭೋಜನ ಮಾಡುವುದಕ್ಕೆ ಮೊದಲೇ ಒಂದು ಹಾವು ಹಾಲಿನಲ್ಲಿ ಯಾರಿಗೂ ತಿಳಿಯದಂತೆ ವಿಷವನ್ನು ಕಕ್ಕಿತ್ತು. ಆ ಬ್ರಾಹ್ಮಣರು ಅದನ್ನು ಕುಡಿದು ಸತ್ತರು. ಅವರ ಮಕ್ಕಳು ರಾಜನಿಗೆ ತಿಳಿಸಿದರು. ರಾಜಭಟರು ಚತುರ್ವೇದಿಯನ್ನು ಮರ್ಮಸ್ಥಾನಗಳಲ್ಲಿ ಹೊಡೆದರು. ಅವನು ಸತ್ತನು. "ತಮ್ಮನ್ನೂ ಹೀಗೆಯೇ ಕೊಲ್ಲುವರು" ಎಂಬ ಭಯದಿಂದ ಅವನ ನಾಲ್ಕು ಜನ ಮಕ್ಕಳೂ ಅರಣ್ಯಕ್ಕೆ ಓಡಿಹೋದರು.

ಆ ನಾಲ್ವರಲ್ಲಿ ಒಬ್ಬನು ಬಾವಿಯಲ್ಲಿ ಬಿದ್ದೂ, ಮತ್ತೊಬ್ಬನು ಮರವನ್ನೇರಿಬಿದ್ದೂ, ಇನ್ನೊಬ್ಬನು ಕಾಡಾನೆಯ ಕೈಗೆ ಸಿಲುಕಿಯೂ, ಮತ್ತೊಬ್ಬನು ಹುಲಿಯ ಬಾಯಿಗೆ ತುತ್ತಾಗಿಯೂ ಸತ್ತರು. ಚತುರ್ವೇದಿಯ ಹೆಂಡತಿಯು ಮನೆಯೊಳಗೆ ನೇಣುಹಾಕಿಕೊಂಡಳು. ಇಬ್ಬರು ಹೆಣ್ಣುಹುಡುಗಿಯರು ಬಾಗಿಲಿಗೆ ಬೆಂಕಿ ಹಚ್ಚಿ ಕದವನ್ನು ತಾಳಹಾಕಿಕೊಂಡು ಮನೆಯೊಳಗೆ ಮಲಗಿಕೊಂಡರು. ಹೀಗೆ ಎಲ್ಲವೂ ಸ್ವಲ್ಪ ಕಾಲದಲ್ಲೇ ನಡೆದು ಆ ಬ್ರಾಹ್ಮಣನ ಹುಡುಗನ ಶಾಪದಂತೆಯೇ ನಿರ್ಮೂಲವಾಯಿತು. ಅನಂತರ ಯಮ ಭಟರು ಚತುರ್ವೇದಿಯ ಕಾಲುಗಳಿಗೆ ಮಿಣೆಯನ್ನು ಹಚ್ಚಿ ಯಮನ ಸಮೀಪಕ್ಕೆ ಎಳೆದುಕೊಂಡು ಹೋಗಿ ನಿಲ್ಲಿಸಲು, ಈ ಚತುರ್ವೇದಿಯು ಯಮನನ್ನು ಕುರಿತು "ನೀನು ಬಹಳ ಅನ್ಯಾಯವನ್ನು ಮಾಡಿದೆ. ನಾನು ಸಾಂಗವಾಗಿ ನಾಲ್ಕು ವೇದಗಳನ್ನೂ ಓದಿದೆನು. ಪ್ರತಿವರ್ಷವೂ ಯಜ್ಞಗಳನ್ನು ಮಾಡಿದೆನು. ಬಂದ ಅತಿಥಿಗಳಿಗೆಲ್ಲಾ ಅನ್ನ ಹಾಕಿ

ಈ ಬಾರಿಯ ವೈರಿಮುಡಿ ಉತ್ಸವ ಮಾರ್ಚ್ ೨೯ ರಂದು ನಡೆಯಿತು. ಎರಡು ಲಕ್ಷಕ್ಕೂ ಹೆಚ್ಚುಮಂದಿ ಭಕ್ತರ ಸಮಕ್ಷಮದಲ್ಲಿ ವೈಭವದಿಂದ ೮ ರಿಂದ ೨.೩೦ ವರೆಗೆ ಶುಕ್ರವಾರ ರಾತ್ರಿ ನಡೆದ ಈ ಉತ್ಸವದಲ್ಲಿ ಭಕ್ತರ ಅನುಕೂಲಕ್ಕಾಗಿ ಉತ್ತಮ ಸಾರಿಗೆ ವ್ಯವಸ್ಥೆ ಆಗಿದ್ದಿತು. ಆದಿಚುಂಚನಗಿರಿಯ ಶ್ರೀ ಶ್ರೀ ಬಾಲಗಂಗಾಧರ ನಾಥಸ್ವಾಮಿಜೀ, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ಇ. ಎಸ್. ವೆಂಕಟರಾಮಯ್ಯ ಮೊದಲಾದ ಹಿರಿಯರೂ ಭಾಗವಹಿಸಿದ್ದರು.

ದೆನು. ಇಂಥಾ ಧಾರ್ಮಿಕನಾದ ನನಗೆ ಇಂಥಾ ಯಮಯಾತನೆಗಳನ್ನು ನೀನು ಕೊಡಬಹುದೇ?"

ಅದಕ್ಕೆ ಯಮಧರ್ಮರಾಜನು - ಎಲೈ ಬ್ರಾಹ್ಮಣನೇ, ನೀನು ಮಾಡಿದ್ದೆಲ್ಲವೂ ನಿಜ, ಆದರೆ ದ್ರವ್ಯ ಸಂಪಾದನೆ ಗೋಸ್ಕರವಾಗಿಯೂ, ದಂಭಕ್ಕಾಗಿಯೂ ಮಾಡಿದೆಯೇ ಹೊರತು ಭಗವತ್ಸೇವಾ ರೂಪವಾಗಿ ಮಾಡಿದೆಯೋ? ಹೇಳು, ಅದಿರಲಿ, ಆ ಯಾದವಗಿರಿವಾಸಿಯಾದ ಬ್ರಾಹ್ಮಣನು ನಿನ್ನ ಮನೆಗೆ ಬಂದಿದ್ದಾಗ ನಡೆದುದೆಲ್ಲವನ್ನೂ ಸ್ಮರಿಸಿಕೋ. ನಿನಗೆ ಇಷ್ಟು ಸಾಲದು. ಅನೇಕ ನರಕಗಳನ್ನು ಅನುಭವಿಸಬೇಕಾಗಿತ್ತು. ಆದರೆ ಆ ಬ್ರಾಹ್ಮಣನು ನಿನ್ನ ಮನೆಯಿಂದ ಹೊರಗೆ ಹೋಗುವಾಗ ಏಳಾವರ್ತಿ ಗೋವಿಂದ ನಾಮೋಚ್ಚಾರಣೆಯನ್ನು ಮಾಡಿದ್ದರ ಮಹಿಮೆಯಿಂದ ನಿನಗೆ ನರಕ ಬಾಧೆಯು ತಪ್ಪಿತು. "ನೀವೆಲ್ಲರೂ ಬ್ರಹ್ಮ ರಾಕ್ಷಸ್ಸಾಗಿ ಹೋಗಿರಿ, ನಿನ್ನಲ್ಲಿ ಅಗ್ರಭೋಜನವನ್ನು ಮಾಡಿದವರು ರಣ ಹದ್ದುಗಳಾಗಲಿ" ಎಂದು ಶಪಿಸಿದ. ಒಡನೆಯೇ ಚತುರ್ವೇದಿಯು ಯಮನಿಗೆ ನಮಸ್ಕಾರ ಮಾಡಿ, "ನನ್ನ ಅಪರಾಧವೆಲ್ಲವನ್ನೂ ಮನ್ನಿಸಿ ಶಾಪಕ್ಕೆ ಅವಧಿಯನ್ನೂ ಅಪ್ಪಣೆ ಕೊಡಿಸಬೇಕು". ಎಂದು ಪ್ರಾರ್ಥಿಸಲು, "ನಿನಗೆ ಕೆಲವು ವಿಷ್ಣು ಭಕ್ತರ ಸಂದರ್ಶನ ವಾಗುವುದೇ ಅವಧಿ" ಎಂದು ಯಮನು ಹೇಳಲು, ತಕ್ಷಣವೇ ಸಪರಿವಾರನಾದ ಚತುರ್ವೇದಿಯು ತಕ್ಕ ವೇಷಭಾಷಾ ರೂಪವುಳ್ಳ ಬ್ರಹ್ಮರಾಕ್ಷಸನಾಗಿ ವಿಂಧ್ಯಪರ್ವತದ ಕಾಡಿನಲ್ಲಿ ಬಿದ್ದನು. ಹೀಗೆ ಬಹಳ ದಿವಸ ಅಲ್ಲಿರುವಾಗ ಕಾಶ್ಮೀರ ದೇಶದಿಂದ ದಕ್ಷಿಣದೇಶಯಾತ್ರೆ ಮಾಡಿಕೊಂಡು ಯಾದವಗಿರಿಯಲ್ಲಿ ಕಲ್ಯಾಣೀ ಸ್ನಾನ ಮಾಡಿಕೊಂಡು ಹಿಂತಿರುಗಿ ತಮ್ಮದೇಶಕ್ಕೆ ಬರುತ್ತಿದ್ದ ಇಬ್ಬರು ವಿಷ್ಣುಭಕ್ತರನ್ನೂ ಅವರ ಜೊತೆಯಲ್ಲಿ ಮತ್ತೆ ಕೆಲವರು ವೈಷ್ಣವರನ್ನೂ ನೋಡಿದನು.

ಆ ವೈಷ್ಣವರು ಪಾದಪ್ರಕ್ಷಾಳನ ಮಾಡಿಕೊಂಡ ಜಾಗದಲ್ಲಿ ಸ್ವಲ್ಪ ನಿಂತಿದ್ದ ಅವರ ಶ್ರೀಪಾದತೀರ್ಥವನ್ನು ಪಾನಮಾಡಿದ್ದರಿಂದಲೂ ಅವರು ಊಟ ಮಾಡಿ ಚೆಲ್ಲಿದ ಅಗುಳನ್ನು ತಿಂದದ್ದರಿಂದಲೂ, ಆ ಬ್ರಹ್ಮರಾಕ್ಷಸನಿಗೆ ಪೂರ್ವಜನ್ಮಸ್ಮರಣೆಯುಂಟಾಗಿ "ಇವರೇ ನಮ್ಮ ಶಾಪ ವಿಮೋಚನಕ್ಕೆ ಕಾರಣಭೂತರು" ಎಂದು ತಿಳಿದು, ದೂರದಲ್ಲಿಯೇ ನಮಸ್ಕಾರ ಮಾಡಿ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಲು ಪರಮ ದಯಾಳುಗಳಾದ ಅವರು ಇವನಿಗೆ ಜ್ಞಾನೋಪದೇಶ ಮಾಡಿ "ನೀನು ಯಾದವಾದ್ರಿ ನಿವಾಸಿಯಲ್ಲಿ ಅಪಚಾರಪಟ್ಟುದರಿಂದ ಬಂದ ಕಷ್ಟವು ಆ ಯಾದವಾದ್ರಿ ವಾಸದಿಂದಲೇ ಹೋಗಬೇಕು. ನೀನು ಅಲ್ಲಿಗೆ ಹೋಗಿ, ಗಿರಿಪ್ರದಕ್ಷಿಣೆ ಮಾಡು. ಭಗವದ್ಭಕ್ತರುಗಳ ಶ್ರೀಪಾದಧೂಳಿಯನ್ನು ನಿತ್ಯವೂ ಶಿರಸಾವಹಿಸು. ಶ್ರೀನಾರಾಯಣನ ಕೃಪೆಯಿಂದ ಕ್ರಮೇಣ ಶಾಪ ವಿಮೋಚನವಾಗುವುದು" ಎಂದು ಹೇಳಿ ತಮ್ಮ ದೇಶಕ್ಕೆ ಹೊರಟು ಹೋದರು. ಅನಂತರ ಈ ಬ್ರಹ್ಮರಾಕ್ಷಸ ಸಪರಿವಾರವಾಗಿ ಯಾದವಾದ್ರಿಗೆ ಬಂದು ಹಾಗೆಯೇ ಮಾಡಿಕೊಂಡಿರಲು ಶ್ರೀ ನಾರಾಯಣನು ದ್ವಾರಪಾಲಕರಾದ ಜಯವಿಜಯರನ್ನು ಕರೆದು ಬ್ರಹ್ಮರಕ್ಷಸ್ಸಾದ ಚತುರ್ವೇದಿಯನ್ನು ಅಷ್ಟತೀರ್ಥಗಳಲ್ಲಿ ಸ್ನಾನಮಾಡಿಸಿ ಪೂರ್ವದಂತೆ ಬ್ರಾಹ್ಮಣ ಜನ್ಮ ಬಂದ ಮೇಲೆ ಕಲ್ಯಾಣಿಯಲ್ಲಿ ಸ್ನಾನಮಾಡಿಸಿ ತಪ್ತ ಚಕ್ರಾಂಕನವನ್ನು ಮಾಡಿ ವೈಷ್ಣವ ರನ್ನಾಗಿ ಮಾಡಿ ನಮ್ಮ ಸಾನ್ನಿಧ್ಯಕ್ಕೆ ಕರೆತರತಕ್ಕದ್ದೆಂದು ಅಪ್ಪಣೆ ಮಾಡಿದನು. ಜಯವಿಜಯರುಗಳೂ ಹಾಗೆಯೇ ಮಾಡಲು ಶ್ರೀಮನ್ನಾರಾಯಣನು ಸಪರಿವಾರನಾದ ಚತುರ್ವೇದಿಯನ್ನು ದಯೆಯಿಂದ ಕಟಾಕ್ಷಿಸಿ ಮೋಕ್ಷೈಶ್ವರ್ಯವನ್ನು ದಯಪಾಲಿಸಿದನು. ಹೀಗೆ ಯಾದವಾದ್ರಿ ನಿವಾಸಿಗಳಲ್ಲಿ ಅಪರಾಧ ಮಾಡಿದವರಿಗೆ ಕಷ್ಟಗಳು ಬರುವುವು. ಅದೂ ಅವರ ಸಹವಾಸದಿಂದಲೇ ಸುಪರಿಣಾಮವಾಗುವುದು, ಎಂದು ನಾರದರು ವ್ಯಾಸಾದಿ ಮಹರ್ಷಿಗಳಿಗೆ ಅಪ್ಪಣೆ ಕೊಡಿಸಿದರು.

## ಶರಣಾಗತ ಸಂರಕ್ಷಣಧರ್ಮ

ಒಂದು ಸಮಯದಲ್ಲಿ ದತ್ತಾತ್ರೇಯರೂ ಶಾಂಡಿಲ್ಯಮಹರ್ಷಿಯೂ ಕಲ್ಯಾಣೀತೀರದಲ್ಲಿ ಕುಳಿತುಕೊಂಡು ಶಾಸ್ತ್ರಾರ್ಥ ವಿಚಾರಗಳನ್ನು ಮಾಡುತ್ತಾ ಇರುವಾಗ, ದಿಗ್ವಿಜಯವನ್ನು ಮಾಡಿಕೊಂಡು ಬಂದ ದತ್ತಾತ್ರೇಯ ಶಿಷ್ಯರು ತಾವು ಬರುವಾಗ ಅರಣ್ಯದಲ್ಲಿ ನೋಡಿದ ಒಂದು ಆಶ್ಚರ್ಯವಾದ ಚರಿತ್ರವನ್ನು ಅವರಿಬ್ಬರ ಮುಂದೆ ಹೇಳಿದರು.

ಒಂದು ದೊಡ್ಡ ಹುಲಿಯು ಒಬ್ಬ ಬೇಡರವನನ್ನು ಹಿಡಿದು ತಿನ್ನಲು ಓಡಿಸಿಕೊಂಡು ಹೋಯಿತು. ಅವನು ಒಂದು ಮರವನ್ನು ಹತ್ತಿದನು. ಆ ಮರದಲ್ಲಿ ಒಂದು ಕಪಿ ಇತ್ತು. "ಈ ಮನುಷ್ಯನನ್ನು ತಳ್ಳಿಬಿಡು" ಎಂದು ಹುಲಿಯು ಕಪಿಯನ್ನು ಕೇಳಿತು. "ನನ್ನ ಮನೆಗೆ ಬಂದವನನ್ನು ನಾನು ತಳ್ಳುವುದಿಲ್ಲ" ಎಂದು ಕಪಿಯು ಹೇಳಿ, ನಿದ್ರೆಯಿಂದ ತೂಕಡಿಸುತ್ತಿರಲು, ಹುಲಿಯು "ಕಪಿಯನ್ನು, ತಳ್ಳಿಬಿಡು, ನಿನ್ನನ್ನು ಬಿಟ್ಟು ಹೋಗುವೆನು" ಎಂದು ಬೇಡರವನನ್ನು ಕುರಿತು ಹೇಳಿತು. ಕೃತಘ್ನನಾದ ಬೇಡರವನು ಕಪಿಯನ್ನು ಮರದಿಂದ ತಳ್ಳಿಬಿಟ್ಟನು.

ಆಗ ಹುಲಿಯು ಕಪಿಯನ್ನು ಹಿಡಿದುಕೊಂಡು, "ಈಗಲೂ ನಿನ್ನನ್ನು ಬಿಟ್ಟುಬಿಡುವೆನು. ಉಪಕಾರಮಾಡಿದ ನಿನಗೇ ದ್ರೋಹಮಾಡಿದ ಈ ಕೃತಘ್ನನನ್ನು ಈಗಲಾದರೂ ತಳ್ಳುವೆಯಾ" ಎಂದು ಕೇಳಿತು. ಆಗ ಕಪಿಯು "ಇಂಥಾ ಪಾಪಿಯನ್ನು ಈಗ ತಳ್ಳದಿರುವೆನೇ" ಎಂದು ಹೇಳಿ ಹುಲಿಯ ಕೈಯಿಂದ ಬಿಡಿಸಿಕೊಂಡು ಮರದ ಮೇಲಕ್ಕೆ ಹೋಗಿ ಕುಳಿತುಕೊಂಡು, "ನನ್ನ ಮನೆಗೆ ಬಂದವರನ್ನು ನಾನೆಂದಿಗೂ ತಳ್ಳುವುದಿಲ್ಲ. ನಿನ್ನ ಹಾದಿ ಹಿಡಿದು ನೀನು ಹೋಗು" ಎಂದುಬಿಟ್ಟಿತು. "ತಿರ್ಯಕ್ಕುಗಳಲ್ಲಿಯೂ ಇಂಥ ಧರ್ಮ ಉಂಟೇ? ಇದೇನಾಶ್ಚರ್ಯ" ಎಂದು ದತ್ತಾತ್ರೇಯ ಶಿಷ್ಯರು ಅವರಿಬ್ಬರೊಡನೆ ಹೇಳಿದರು. ದತ್ತಾತ್ರೇಯ ಶಿಷ್ಯರು ಹೇಳಿದುದನ್ನು ಕೇಳಿ ಶಾಂಡಿಲ್ಯರು, "ಇದು ಶರಣಾಗತ ರಕ್ಷಣಧರ್ಮವೆಂಬುದು ಸರ್ವಧರ್ಮಗಳಿಗಿಂತಲೂ ಉತ್ತಮವಾದುದು. ಇದು ಪಶುಪಕ್ಷ್ಯಾದಿಗಳಲ್ಲೂ ಇರತಕ್ಕದ್ದು. ಆದರೆ ಇದಕ್ಕಿಂತಲೂ ವಿಶೇಷವಾದ ಮತ್ತೊಂದು ವೃತ್ತಾಂತವನ್ನು ಹೇಳುವೆನು ಕೇಳಿರಿ" ಎಂದು ಹೇಳತೊಡಗಿದರು.

ಒಂದು ಅರಣ್ಯದಲ್ಲಿ ಒಂದು ಮರದ ಮೇಲೆ 'ನಾಳೀಜಂಘ'ನೆಂಬ ಒಂದು ಹಂಸಪಕ್ಷಿಯು ವಾಸವಾಗಿತ್ತು. ಅಲ್ಲಿಗೆ ಬಹಳ ದರಿದ್ರನಾದ ಒಬ್ಬ ಬ್ರಾಹ್ಮಣನು ಹಸಿವು, ಬಾಯಾರಿಕೆ, ಮಾರ್ಗಶ್ರಮ ಇವುಗಳಿಂದ ಬಹಳ ಕಂಗೆಟ್ಟು ವಿಶ್ರಮಿಸಿಕೊಳ್ಳುವುದಕ್ಕೆ ಬಂದನು. ಆತನಿಗೆ ಆ ಹಂಸವು ಸರ್ವ ಉಪಚಾರಗಳನ್ನೂ ಮಾಡಿ ಅವನ ದುರ್ದೆಶೆಗಳನ್ನೆಲ್ಲಾ ವಿಚಾರಿಸಿ, ದಯೆಯಿಂದ "ಎಲೈ ಬ್ರಾಹ್ಮಣನೇ ಇಂತಹ ಸ್ಥಳಗಳಲ್ಲಿ ನನ್ನ ಸ್ನೇಹಿತನಾದ ರಾಕ್ಷಸರಾಜನಿದ್ದಾನೆ. ಅವನಲ್ಲಿ ಹೋಗಿ ನಾನು ಹೇಳಿದ್ದಾಗಿ ಹೇಳಿ ನಿನ್ನಿಷ್ಟ ಬಂದಷ್ಟು ದ್ರವ್ಯವನ್ನು ತೆಗೆದುಕೊಂಡು ಹೋಗು" ಎಂದು ಹೇಳಿತು. ಈ ಬ್ರಾಹ್ಮಣನು ಬಹಳ ಸಂತುಷ್ಟನಾಗಿ ಅಲ್ಲಿಗೆ ಹೋಗಿ ತಾನು ಹೊರುವಷ್ಟು ದ್ರವ್ಯವನ್ನು ಹೊತ್ತುಕೊಂಡು ಈ ಮರದ ಹತ್ತಿರ ಬಂದು ನೋಡಿದಾಗ ಆ ಪಕ್ಷಿಯು ಮರದ ಮೇಲೆ ನಿದ್ರೆ ಮಾಡುತ್ತಿತ್ತು. ಅದನ್ನು ಹಿಡಿದು ಕೊಂದು ಬೇಯಿಸಿ ತಿಂದು ಹೋಗುತ್ತಿರುವಾಗ, ಆ ರಾಕ್ಷಸಭೃತ್ಯರು ಬಂದು ಮರದ ಮೇಲೆ ಆ ಪಕ್ಷಿಯನ್ನು ಕಾಣಲಿಲ್ಲ.

ಆ ಮರದ ಕೆಳಗೆ ಬಿದ್ದಿದ್ದ ಆ ಪಕ್ಷಿಯ ರೆಕ್ಕೆ ಪುಕ್ಕಗಳನ್ನು ನೋಡಿ, "ಈಗ ಬಂದಿದ್ದವನೇ ಈ ಕೆಲಸವನ್ನು ಮಾಡಿರಬಹುದು" ಎಂದು ಊಹಿಸಿ, ಅವನನ್ನು ಹುಡುಕಿ ಹಿಡಿದು ಅವನ ಮುಖವಿಕಾರ, ಭಯ ಮತ್ತು ಅವನಲ್ಲಿದ್ದ ಮಾಂಸಶೇಷ ಇವುಗಳಿಂದ ಅವನೇ ಹಂಸವನ್ನು ಕೊಂದವನೆಂದು ನಿಶ್ಚಯಿಸಿ ಅವನನ್ನು ಕೊಂದರು. ತರುವಾಯ ತಮ್ಮ ತಮ್ಮ ಕೃತ್ಯಗಳಿಂದ ನಾಳೀಜಂಘನು ಸ್ವರ್ಗಕ್ಕೆ ಹೋದನು; ಬ್ರಾಹ್ಮಣನು ನರಕಕ್ಕೆ ಹೋದನು. ಅಲ್ಲಿಯೂ ನಾಳೀಜಂಘನು ದೇವತೆಗಳನ್ನು ಪ್ರಾರ್ಥಿಸಿ ಬ್ರಾಹ್ಮಣನನ್ನು ನರಕದಿಂದ ಕರೆಸಿಕೊಂಡು ಇಬ್ಬರೂ ಸ್ವರ್ಗಸುಖವನ್ನು

ಅನುಭವಿಸಿದರು. ನೀವು ನೋಡಿ ಹೇಳಿದ ಕಪಿವೃತ್ತಾಂತದಲ್ಲಿ ಕಪಿಯು ಸಾಯಲಿಲ್ಲ. ತನ್ನನ್ನು ತಳ್ಳಿದರೂ ಆಗಲೇ ಅವನನ್ನು ಕಾಪಾಡಿತು. ನಾನು ಹೇಳಿದ್ದರಲ್ಲಿ ಆ ಪಕ್ಷಿಗೆ ಪ್ರಾಣವೇ ಹೋಯಿತು. ಲೋಕಾನ್ತರ ದೇಹಾನ್ತರಗಳಲ್ಲೂ ಆ ಬ್ರಾಹ್ಮಣನನ್ನು ಕಾಪಾಡಿತು. ಅದು ವಾನರ. ಇದು ಪಕ್ಷಿ. ಶರಣಾಗತ ಸಂರಕ್ಷಣ ಧರ್ಮವಿಂಥಾದ್ದು. ಹೀಗಿರುವಲ್ಲಿ ಸರ್ವಜ್ಞನಾಗಿ ಸರ್ವಶಕ್ತನಾಗಿ ಸರ್ವಸ್ವಾಮಿಯಾದ ಶ್ರಿಯಃಪತಿಯಲ್ಲಿ ಚೇತನನು ಸ್ವರೂಪಜ್ಞಾನ ಪುರಸ್ಸರವಾಗಿ ಶರಣಾಗತಿಯನ್ನು ಮಾಡಿದರೆ ಫಲದಲ್ಲಿ ಸಂದೇಹ ಉಂಟೇ?"ಎಂದು ಶಾಂಡಿಲ್ಯರು ಹೇಳಿದರು.

ಶಾಂಡಿಲ್ಯರು ಹೀಗೆ ಹೇಳುತ್ತಿರುವಾಗ ವ್ಯಾಸರ ತಂದೆಯಾದ ಪರಾಶರ ಮಹರ್ಷಿಯೂ ಅವರ ಶಿಷ್ಯರಾದ ಮೈತ್ರೇಯ ಮಹರ್ಷಿಯೂ ಅಲ್ಲಿಗೆ ಬಂದು ಅವರಿಗೆ ನಮಸ್ಕಾರ ಮಾಡಿ ಅವರಿಂದ ಸತ್ಕರಿಸಲ್ಪಟ್ಟು ಕುಳಿತುಕೊಳ್ಳಲು, "ನೀವು ಇಲ್ಲಿಗೆ ಬಂದ ಕಾರಣವೇನು?" ಎಂದು ದತ್ತಾತ್ರೇಯರು ಕೇಳಿದ್ದಕ್ಕೆ ಪರಾಶರ ಮಹರ್ಷಿಯು ಹೇಳಿದ್ದೇನೆಂದರೆ -- ನಾನು ಉತ್ತರ ಬದರಿಕಾಶ್ರಮಕ್ಕೆ ಹೋಗಿದ್ದೆನು. ಅಲ್ಲಿ ನಾರಾಯಣ ಮಹರ್ಷಿಯು "ಎಲೈ ಪರಾಶರರೇ, ದಕ್ಷಿಣ ಬದರಿಕಾಶ್ರಮವೆಂದು ಪ್ರಸಿದ್ಧವಾದ ನಾರಾಯಣಗಿರಿಯಲ್ಲಿ ನೀವು ತತ್ತ್ವಹಿತ ಪುರುಷಾರ್ಥಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಪುರಾಣ ರತ್ನವಾದ ಸರ್ವಪ್ರಮಾಣಭೂತವಾದ ವಿಷ್ಣುಪುರಾಣವನ್ನು ಮೈತ್ರೇಯರಿಗೆ ಪ್ರವಚನ ಮಾಡಿರಿ" ಎಂದು ನನಗೆ ಅಪ್ಪಣೆ ಕೊಡಿಸಿದರು. ಅದಕ್ಕಾಗಿ ಇಲ್ಲಿ ಬಂದೆನೆಂದು ಹೇಳಿದರು.

## ಸಪ್ತಕ್ಷೇತ್ರಗಳು

ಶ್ರೀ ಕಲ್ಯಾಣೀತೀರ್ಥದ ಪೂರ್ವ ದಿಕ್ಕಿನಲ್ಲಿ ಪರ್ವತ ಶಿಖರದ ಮೇಲೆ ಯೋಗ ನೃಸಿಂಹನು ಪ್ರಹ್ಲಾದನಿಗೆ ಪ್ರತ್ಯಕ್ಷನಾಗಿ ಸಾನ್ನಿಧ್ಯವನ್ನು ಮಾಡಿ ಈಗಲೂ ಎಲ್ಲರಿಗೂ ಅವರವರ ಇಷ್ಟ ಫಲಗಳನ್ನು ಕೊಡುತ್ತಿದ್ದಾನಾದುದರಿಂದ ಇದು 'ನಾರಸಿಂಹಕ್ಷೇತ್ರ' ಈ ಪರ್ವತದ ಕೆಳಗೆ ಕಲ್ಯಾಣಿಯ ಪೂರ್ವದಿಕ್ಕಿನ ತೀರದಲ್ಲಿ 'ವರಾಹಕ್ಷೇತ್ರ'. ಇಲ್ಲಿ ವ್ರತ - ಜಪ - ದಾನಾದಿಗಳಿಂದ ಶೀಘ್ರಸಿದ್ಧಿ ಉಂಟಾಗುವುದು. ಈ ವರಾಹ ಕ್ಷೇತ್ರದಲ್ಲಿ ಭೂದೇವಿಯನ್ನುದ್ಧಾರ ಮಾಡಿದ ಆದಿ ವರಾಹ ಮೂರ್ತಿಯು ತನ್ನ ಎಡತೊಡೆಯ ಮೇಲೆ ಭೂದೇವಿಯನ್ನು ಕುಳ್ಳಿರಿಕೊಂಡು ವರಾಹ ಚರಮ ಶ್ಲೋಕವನ್ನು ಉಪದೇಶ ಮಾಡಿದರು.

ಈ ಕಲ್ಯಾಣ ತೀರ್ಥದ ದಕ್ಷಿಣತೀರದಲ್ಲಿ ಲಕ್ಷ್ಮಣರಚಿತವಾದ ಪರ್ಣಶಾಲೆಯಲ್ಲಿ ಶ್ರೀರಾಮನು ವಾಸಮಾಡುತ್ತಿದ್ದನಾದ್ದರಿಂದ ಈ ಕ್ಷೇತ್ರಕ್ಕೆ 'ಸೀತಾರಣ್ಯ' ಎಂದು ಹೆಸರು. ಇಲ್ಲಿನ ತುಳಸೀಕಾಷ್ಠಗಳಿಂದ ಮಣಿಗಳನ್ನು ಮಾಡಿ ಆ ಮಾಲಿಕೆಯನ್ನು ಧರಿಸುವುದು ಅತಿಪ್ರಶಸ್ತ. ಈ ಕಲ್ಯಾಣೀ ತೀರ್ಥದ ಪಶ್ಚಿಮ ತೀರದಲ್ಲಿ ಅಜ್ಞಾನ ನಿವಾರಕವೆಂಬ 'ಜ್ಞಾನಾಶ್ವತ್ಥ'ವಿರುವುದು. ಅದರ ಕೆಳಗೆ ಶುಕ, ಪುಂಡರೀಕ, ರುಕ್ಮಾಂಗದ, ಅಂಬರೀಷ, ಪ್ರಹ್ಲಾದ ಈ ಐದು ಭಾಗವತರುಗಳು ನಾರಾಯಣ ಧ್ಯಾನದಲ್ಲಿ ನಿರತರಾಗಿದ್ದರಿಂದ ಇದಕ್ಕೆ 'ಪಂಚಭಾಗವತಕ್ಷೇತ್ರ'ವೆಂದು ಹೆಸರು. ಈ ಪಂಚಭಾಗವತ ಕ್ಷೇತ್ರಕ್ಕೆ ಪಶ್ಚಿಮ ದಿಕ್ಕಿನಲ್ಲಿ ಸ್ವಲ್ಪವೇ ದೂರದಲ್ಲಿ 'ತಾರ್ಕ್ಷ್ಯಕ್ಷೇತ್ರ'ವೆಂಬುದೊಂದು ಕ್ಷೇತ್ರವುಂಟು. ಇಲ್ಲಿ ವಿಷ್ಣುವಿನ ಅಪ್ಪಣೆ ಪ್ರಕಾರ ಗರುಡನು ಶ್ವೇತದ್ವೀಪದಿಂದ ಶ್ವೇತಮೃತ್ತಿಕೆಯನ್ನು ತಂದು ಇರಿಸಿದನು. ಅದು ಭಗವದಾಜ್ಞೆಯಿಂದ ಅಕ್ಷಯವಾಗಿದೆ. ಆ ಶ್ವೇತ ಮೃತ್ತಿಕೆಯಿಂದ ಲಲಾಟ ಮುಂತಾದ ಹನ್ನೆರಡು ಸ್ಥಾನಗಳಲ್ಲಿ ದ್ವಾದಶೋರ್ಧ್ವ ಪುಂಡ್ರಗಳನ್ನು ಧರಿಸತಕ್ಕವರು ಸೂರಿ ದೃಶ್ಯವಾದ ವೈಕುಂಠ ಲೋಕವನ್ನು ಹೊಂದುವುದಕ್ಕೆ ಸಿದ್ಧರಾಗಿ ಇದ್ದಾರೆ. ಈಗ ಐದು ಕ್ಷೇತ್ರಗಳು ಹೇಳಲ್ಪಟ್ಟವು. ಇನ್ನೆರಡು, ಪರಿಧಾನ ಶಿಲಾಕ್ಷೇತ್ರ, ನಯನಕ್ಷೇತ್ರಂ ಇವೆರಡೂ, ವೇದಪುಷ್ಕರಿಣೀ, ನಾರಾಯಣತೀರ್ಥ ಇವುಗಳ ಸಮೀಪದಲ್ಲಿವೆಯಾದ್ದರಿಂದ ಆ ಎರಡು ತೀರ್ಥಗಳನ್ನು ಹೇಳುವಾಗ ಹೇಳಲ್ಪಡುತ್ತೆ.

## ಅಷ್ಟತೀರ್ಥಗಳು

ನಾಸ್ತಿಕರು, ವೇದಬಾಹ್ಯರು, ಕುದೃಷ್ಟಿಗಳು ಇವರೆಲ್ಲರೂ ವೇದವನ್ನು ದೂಷಿಸಲು, ಆ ವೇದೋದ್ಧಾರಕ್ಕಾಗಿ ವಿಷ್ಣುವು ದತ್ತಾತ್ರೇಯಾವತಾರವನ್ನು ಮಾಡಿ ನಾಲ್ಕುವೇದಗಳನ್ನೂ ನಾಲ್ಕು ಶಿಷ್ಯರನ್ನಾಗಿಯೂ ಅಂಗೋಪಾಂಗಗಳನ್ನು ಪ್ರಶಿಷ್ಯರನ್ನಾಗಿಯೂ ಮಾಡಿಕೊಂಡು ಎಲ್ಲರಿಗೂ ವೇದಾರ್ಥಗಳು ಎಲ್ಲವನ್ನೂ ಈ ತೀರ್ಥದ ತೀರದಲ್ಲಿ ಉಪದೇಶಮಾಡಿದರಾದುದರಿಂದ ಈ ತೀರ್ಥಕ್ಕೆ 'ವೇದ ಪುಷ್ಕರಿಣೀ' ಎಂದು ಹೆಸರಾಯಿತು. ಈ ಪುಷ್ಕರಿಣೀ ತೀರದಲ್ಲಿ ಒಂದು ಶಿಲೆಯು ಇದೆ. ಅದರ ಮೇಲೆ ಕಾಷಾಯವನ್ನಿಟ್ಟು ದತ್ತಾತ್ರೇಯರು ಪರಿಗ್ರಹಿಸಿದರಾದುದರಿಂದ ಈ ಶಿಲೆಗೆ 'ಪರಿಧಾನ ಶಿಲೆ' ಎಂದು ಹೆಸರಾಗಿ ಈ ಕ್ಷೇತ್ರಕ್ಕೆ 'ಪರಿಧಾನ ಶಿಲಾಕ್ಷೇತ್ರ' ಎಂದು ಹೆಸರಾಯಿತು. ಪರಿಧಾನವೆಂದರೆ ಉಡುವ ವಸ್ತ್ರ.

ದತ್ತಾತ್ರೇಯರು ಈ ತೀರ್ಥದಲ್ಲಿ ಬೆಳೆದಿದ್ದ ದರ್ಭೆಗಳನ್ನು ತಮ್ಮ ನಿತ್ಯಾನುಷ್ಠಾನುಕ್ಕಾಗಿ ತೆಗೆದುಕೊಳ್ಳುತ್ತಿದ್ದರಾದುದರಿಂದ ಇದಕ್ಕೆ 'ದರ್ಭತೀರ್ಥ' ಎಂದು ಹೆಸರು. ಯಾರು ಪ್ರಾಣ ಪ್ರಯಾಣಕಾಲದಲ್ಲಿ ಇಲ್ಲಿನ ದರ್ಭೆಗಳನ್ನು ಹಾಕಿಕೊಂಡು ಪ್ರಾಣ ಬಿಡುವರೋ ಅವರಿಗೆ ಮುಕ್ತಿಯುಂಟಾಗುವುದು. ಮತ್ತು ಇಲ್ಲಿ ಶಾಂಡಿಲ್ಯ ಮಹರ್ಷಿ ಭಗವದಾರಾಧನಕ್ಕೆ ಮುಖ್ಯ ಪ್ರಮಾಣಭೂತವಾದ ಪಾಂಚರಾತ್ರ ಶಾಸ್ತ್ರವನ್ನು ಪ್ರವಚನ ಮಾಡಿದರು.

ಈ ದರ್ಭತೀರ್ಥದ ಉತ್ತರದಿಕ್ಕಿನಲ್ಲಿ 'ಪಲಾಶತೀರ್ಥ' ಎಂದು ಒಂದು ತೀರ್ಥವಿದೆ. ಇಲ್ಲಿ ವಿಶೇಷವಾಗಿ ಪಲಾಶ (ಮುತ್ತುಗ) ವೃಕ್ಷಗಳಿರುವುದರಿಂದ ಇದಕ್ಕೆ ಈ ಹೆಸರು. ವಿಶ್ವಾಮಿತ್ರರ ಶಾಪದಿಂದ ಚಂಡಾಲರಾದ ವಸಿಷ್ಠ ಪುತ್ರರುಗಳಿಗೆ ಇಲ್ಲಿ ಸ್ನಾನದಿಂದ ಶಾಪವಿಮೋಚನೆಯಾಯಿತು. ಈ ತೀರ್ಥದ ಪಶ್ಚಿಮದಲ್ಲಿ 'ಯಾದವೀ' ಎಂಬ ಒಂದು ನದಿ ಯಿರುವುದು. ಇದರ ತೀರದಲ್ಲಿ ಯಾದವೇಂದ್ರನೆಂಬ ದೊರೆಯು ಯಾಗಮಾಡಿ ಸ್ವರ್ಗವನ್ನು ಹೊಂದಿದನಾದುದರಿಂದ ಇದಕ್ಕೆ 'ಯಾದವೀ' ಎಂದು ಹೆಸರಾಯಿತು.

ಆ ಪಲಾಶತೀರ್ಥದ ಉತ್ತರ ದಿಕ್ಕಿನಲ್ಲಿ 'ಪದ್ಮತೀರ್ಥ' ಎಂಬ ತೀರ್ಥವಿದೆ. ಇದರಲ್ಲಿ ಬೆಳೆದ ಕಮಲಗಳಿಂದ ಸನತ್ಕುಮಾರರು ಶ್ರೀಮನ್ನಾರಾಯಣನನ್ನು ನಿತ್ಯಾರ್ಚನೆ ಮಾಡುತ್ತಿದ್ದರು. ಆದುದರಿಂದ ಇದು 'ಪದ್ಮತೀರ್ಥ'. ಇಲ್ಲಿಯ ಕಮಲ ಮಣಿಗಳ ಸರವನ್ನು ಯಾರು ಕಂಠದಲ್ಲಿ ಧರಿಸುವರೋ ಅವರು ವೈಕುಂಠಲೋಕದಲ್ಲಿ ದಿವ್ಯಾಪ್ಸರಸ್ಸುಗಳ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಡುವರು.

ಶ್ರೀ ಕಲ್ಯಾಣೀ ತೀರ್ಥಕ್ಕೆ ಉತ್ತರ ದಿಕ್ಕಿನಲ್ಲಿ 'ಮೈತ್ರೇಯತೀರ್ಥ' ಇರುವುದು. ಇಲ್ಲಿಯೇ ಪರಾಶರ ಮಹರ್ಷಿಯು ಮೈತ್ರೇಯರಿಗೆ ವಿಷ್ಣುಪುರಾಣವನ್ನು ಉಪದೇಶ ಮಾಡಿದರು. ಆದುದರಿಂದ ದಕ್ಷಿಣ ದೇಶದವರು ಶಿಷ್ಯರ ಹೆಸರನ್ನಿಟ್ಟು 'ಮೈತ್ರೇಯಕುಂಡ' ಎನ್ನುವರು. ಉತ್ತರದೇಶದವರು ಆಚಾರ್ಯರ ಹೆಸರನ್ನಿಟ್ಟು 'ಪರಾಶರತೀರ್ಥ' ಎನ್ನುವರು.

ಈ ಮೈತ್ರೇಯತೀರ್ಥದ ಉತ್ತರದಿಕ್ಕಿನಲ್ಲಿ 'ನಾರಾಯಣತೀರ್ಥ' ಇರುವುದು. ಇದರ ಸಮೀಪದಲ್ಲಿ ಯಾರು ಚರಮಸಂಸ್ಕಾರ ಮಾಡಲ್ಪಡುವರೋ ಅವರಿಗೆ ಅದೇ ಚರಮ ಶರೀರವಾಗಿ ಮೋಕ್ಷವನ್ನು ಹೊಂದುವರು. ಇದರ ತೀರದಲ್ಲಿಯೇ 'ವಿಷ್ಣುಚಿತ್ತ' ನೆಂಬ ಬ್ರಾಹ್ಮಣ ಬ್ರಹ್ಮಚಾರಿಗೆ ಶ್ರೀಮನ್ನಾರಾಯಣನು ಪ್ರತ್ಯಕ್ಷವಾಗಿ, ಮೋಕ್ಷೈಶ್ವರ್ಯವನ್ನು ಕೊಟ್ಟನು. ಈ ವಿಷ್ಣುಚಿತ್ತನ ಕಥೆ ಏನೆಂದರೆ - ಈ ವಿಷ್ಣುಚಿತ್ತನು ಈ ನಾರಾಯಣಾದ್ರಿಯಲ್ಲೇ ಹುಟ್ಟಿ ಬ್ರಹ್ಮಚಾರಿಯಾಗಿ ಸಾಂಗವೇದಾಧ್ಯಯನಾದಿಗಳನ್ನು ಮಾಡಿ, ತಂದೆತಾಯಿಗಳು ವಿವಾಹ ಮಾಡುವುದಕ್ಕೆ ಯತ್ನಿಸಲು ನೈಮಿಷಾರಣ್ಯಕ್ಕೆ ಹೊರಟುಹೋಗಿ ಘೋರವಾದ ತಪಸ್ಸನ್ನು ಮಾಡುತ್ತಿರು

ವಾಗ ಒಬ್ಬ ದೊರೆಯು ತನಗೆ ಗಂಡುಮಕ್ಕಳು ಇಲ್ಲ ದುದರಿಂದ ತನ್ನ ಮಗಳನ್ನೂ ರಾಜ್ಯವನ್ನೂ ಕೊಡುವುದಾಗಿ ಹೇಳಿ ಕರೆಯಲು, "ನಿನ್ನ ಮಗಳನ್ನು ರತ್ನಗಳಿಂದ ಮಾಡಿದೆಯೇ? ಮಲಮೂತ್ರ ರಕ್ತಮಾಂಸಾದಿಗಳಿಂದ ತುಂಬಿರುವ ಚಕ್ಕಳದ ಚೀಲವಲ್ಲವೇ? ನಿನ್ನ ರಾಜ್ಯವು ರಾಜ್ಯವೇ? ಅನೇಕ ಕ್ಲೇಶಕರವಾದ ನರಕವಲ್ಲವೇ? ಇದು ಯಾರಿಗೆ ಬೇಕು?" ಎಂದು ಹೇಳಿಕಳುಹಿಸಿಬಿಟ್ಟನು. ಅನಂತರ ಇವನ ತಪಸ್ಸನ್ನು ನೋಡಿ ಇದನ್ನು ಕೆಡಿಸದೇಕೆಂದು ಇಂದ್ರನು ಅಪ್ಸರಸ್ಸುಗಳನ್ನು ಕಳುಹಿಸಿದನು. ಅವರನ್ನು ಈ ಬ್ರಾಹ್ಮಣನು "ಕಪಿಗಳಾಗಿರಿ" ಎಂದು ಶಪಿಸಿದರು. ಅನಂತರ ಇಂದ್ರನು ಬ್ರಾಹ್ಮಣವೇಷವನ್ನು ಹಾಕಿಕೊಂಡು ಬಂದು ಅವನಿಗೆ ಒಳ್ಳೇ ಮಾತುಗಳನ್ನೂ ಹೇಳಿ ಅವರಿಗೆ ಶಾಪವಿಮೋಚನವಾಗುವಂತೆ ಮಾಡಿಕೊಂಡು ಹೋದನು. ರುದ್ರನು ಬಂದು "ವರವನ್ನು ಬೇಡು" ಎನ್ನಲು ಇವನು "ನನಗೆ ಮೋಕ್ಷಬೇಕು" ಎಂದು ಕೇಳಲು "ಅದಕ್ಕೆ ನನಗೆ ಅಧಿಕಾರವಿಲ್ಲ" ಎಂದು ರುದ್ರನು ಹೇಳಲು ಇವನು "ದಯಮಾಡಿಸಿರಿ" ಎಂದನು. ಬ್ರಹ್ಮನು ಬಂದು "ನನ್ನ ಲೋಕವನ್ನು ಕೊಡುವೆನು ಬಾ" ಎಂದು ಕರೆಯಲು "ನಿನ್ನನ್ನೂ ನನ್ನನ್ನೂ ಸೃಷ್ಟಿಸಿದವನು ಯಾರೋ, ನಿನಗೂ ನನಗೂ ಇಂತಹ ಅಧಿಕಾರಗಳನ್ನು ಕೊಟ್ಟಿರುವವನು ಯಾರೋ ಅಂಥಾ ಶ್ರೀಮನ್ನಾರಾಯಣನನ್ನು ಬಿಟ್ಟು ಮತ್ತೊಬ್ಬರು ಒಂದು ವಸ್ತುವೇ? ದಯವಿಟ್ಟು ದಯಮಾಡಿಸಿರಿ" ಎಂದನು. ಅನಂತರ ಇವನಿಗೆ ಅಷ್ಟಾಕ್ಷರೋಪದೇಶ ಮಾಡಿದ ಆಚಾರ್ಯನು ಬಂದು "ಇನ್ನು ನೀನು ನಾರಾಯಣ ಗಿರಿಯಲ್ಲಿದ್ದು ತಪಸ್ಸುಮಾಡು" ಎನಲು, ಆಗ ಪುನಃ ನಾರಾಯಣಾದ್ರಿಗೆ ಬಂದು ಈ ನಾರಾಯಣ ತೀರ್ಥದಲ್ಲಿ ನಿತ್ಯ ಕರ್ಮಾನುಷ್ಠಾನ ಮಾಡುತ್ತಾ ನಯನ ಕ್ಷೇತ್ರದಲ್ಲಿ ತಪಸ್ಸು ಮಾಡುತ್ತಿದ್ದು, ದಿವ್ಯಾಭರಣ ದಿವ್ಯಾಯುಧ ದಿವ್ಯಮಹಿಷೀ ಸಹಿತ ಗರುಡಾರೂಢನಾಗಿ ಪ್ರತ್ಯಕ್ಷನಾಗಿ ಬಂದ ಶ್ರೀಮನ್ನಾರಾಯಣನನ್ನು ದರ್ಶನ ಮಾಡಿ ಕೃತಾರ್ಥನಾಗಿ ಅವನ ಪರಮಕೃಪೆಯಿಂದ ಮೋಕ್ಷೈಶ್ವರ್ಯವನ್ನು ಹೊಂದಿದನು.

ಈ ತೀರ್ಥದ ಪೂರ್ವಕ್ಕೆ ಮೇಲುಭಾಗದ ಪರ್ವತದ ಸಾನುವಿನಲ್ಲಿ 'ನಯನಕ್ಷೇತ್ರ' ಎಂಬ ಕ್ಷೇತ್ರವಿದೆ. 'ನಯತೀತಿ - ನಯನಂ' ಎಂಬ ಶಬ್ದವ್ಯುತ್ಪತ್ತಿಯಿಂದ ಇದಕ್ಕೆ ಈ ಹೆಸರು. ಅಂದರೆ ಸ್ವಾಶ್ರಿತರನ್ನು ಮೋಕ್ಷವನ್ನು ಹೊಂದಿಸುವುದೆಂದು ಅರ್ಥ. ಇಲ್ಲಿ ಕೇಶವ ಮೂರ್ತಿಯ ಸಾನ್ನಿಧ್ಯದಿಂದ ಕ್ಷಿಪ್ರದಲ್ಲೇ ಮಂತ್ರಾದಿ ಸಿದ್ಧಿಯಾಗುವುದು. ವಿಷ್ಣುಚಿತ್ತನು ತಪಸ್ಸು ಮಾಡಿದ್ದೂ ಇಲ್ಲಿಯೇ.

ಪೂರ್ವದಲ್ಲಿ ತ್ರಿವಿಕ್ರಮಾವತಾರಿಯಾದ ವಿಷ್ಣುವಿನ ಪಾದವನ್ನು ಬ್ರಹ್ಮನು ತನ್ನ ಕಮಂಡಲು ತೀರ್ಥದಿಂದ ಶೋಭಿಸಿದಾಗ ಗಂಗಾನದಿಯು ಹುಟ್ಟಿತು. ಶ್ರೀ ವೈಕುಂಠವಾಸಿಗಳಾದ ನಿತ್ಯ ಮುಕ್ತರು ವಿರಜಾನದಿ ತೀರ್ಥದಿಂದ ಶೋಧಿಸಿದಾಗ ಸ್ವಲ್ಪ ತೀರ್ಥವು ಈ ನಾರಾಯಣಗಿರಿಯ ಉತ್ತರ ದಿಕ್ಕಿನಲ್ಲಿ ಬಿದ್ದು ಪ್ರವಹಿಸಿತು. ಅದು 'ವೈಕುಂಠಗಂಗೆ' (ತೊಟ್ಟಿಲು ಮಡುವು) ಎನ್ನಿಸಿಕೊಂಡಿತು. ಇದರ ತೀರದಲ್ಲಿ ಭಕ್ತಿಸಾರರೆಂಬ ಮುನೀಶ್ವರರು ತಪಸ್ಸು ಮಾಡಿ ಮೋಕ್ಷವನ್ನು ಹೊಂದಿದರು. ಹೀಗೆ ಅಷ್ಟತೀರ್ಥಗಳೂ ಸಪ್ತಕ್ಷೇತ್ರಗಳೂ ನಾರದರಿಂದ ಹೇಳಲ್ಪಟ್ಟವು.

ಹೀಗೆ ಕಲಿಪ್ರವೇಶವಿಲ್ಲದಿರುವ ಕ್ಷೇತ್ರವನ್ನು ತಿಳಿಯದೇಕೆಂದು ಉತ್ತರ ಬದರಿಕಾಶ್ರಮಕ್ಕೆ ಹೋಗಿದ್ದ ವ್ಯಾಸಾದಿ ಮಹರ್ಷಿಗಳಿಗೆ ನಾರದ ಮಹರ್ಷಿಯು ಯಾದವಗಿರಿ ಮಾಹಾತ್ಮ್ಯವನ್ನೂ ಅಲ್ಲಿರುವ ಕ್ಷೇತ್ರ ತೀರ್ಥಗಳ ಮಹಿಮೆಗಳನ್ನೂ ಅಲ್ಲಿ ಕಲಿಪ್ರವೇಶವಿಲ್ಲವೆಂತಲೂ ಹೇಳಲು ವ್ಯಾಸಾದಿಗಳೂ ಬಹಳ ಸಂತುಷ್ಟರಾಗಿ ಆ ಯಾದವಾದ್ರಿಗೆ ತಾವೆಲ್ಲರೂ ಹೋಗಿ ಪ್ರತ್ಯಕ್ಷದಲ್ಲಿ ಅದರ ಮಹಿಮೆಗಳನ್ನು ಅನುಭವಿಸಬೇಕೆಂದು ಕುತೂಹಲವುಳ್ಳವರಾಗಿ ಆ ನಾರದರನ್ನೂ ಕರೆದುಕೊಂಡು ಪ್ರಯಾಣ ಹೊರಟು ಗಂಗಾನದಿಯಲ್ಲಿ ದೋಣಿಯಲ್ಲಿ ಕುಳಿತುಕೊಂಡು ಬರುತ್ತಿರುವಾಗ, ಬಿರುಗಾಳಿಯಿಂದ ಸರ್ವಪ್ರಯತ್ನದಿಂದಲೂ ನಡೆಸುವುದಕ್ಕಾಗದೇ, ದೋಣಿಯು ಸಮುದ್ರ ಮಾರ್ಗವನ್ನು ಹಿಡಿಯಲು ಋಷಿಗಳೆಲ್ಲರೂ ಯಾದವಾದ್ರಿಗೆ ಹೋಗುವ ವಿಷಯದಲ್ಲಿ ನಿರಾಶರಾಗಿ ಚಿಂತಾಕ್ರಾಂತರಾಗಿರುವಾಗ, ವ್ಯಾಸರು ದೋಣಿಯನ್ನು ನಡೆಸುವ ಬೆಸ್ತರನ್ನು ಕುರಿತು "ನಿಮ್ಮ ಕೈಯಲ್ಲಿರುವ ಜಳವೆ, ಹುಟ್ಟು ಮುಂತಾದ ಸಾಧನಗಳನ್ನು ನೀರಿನಲ್ಲಿ ಎಸೆದು ಬಿಡಿರಿ" ಎಂದೂ ಹೇಳಲು, ಅದರಂತೆಯೇ ಅವರೆಲ್ಲರೂ ಮಾಡುತ್ತಿರಲು, ತನ್ನಷ್ಟಕ್ಕೆ ತಾನೇ ಆಚೆಯ ದಡಕ್ಕೆ ದೋಣಿಯು ಬಂದು ಸೇರಿತು. ಋಷಿಗಳೆಲ್ಲರೂ ಬಹಳ ಆಶ್ಚರ್ಯಪಟ್ಟು ಸಂತೋಷದಿಂದ ದೋಣಿಯಿಂದಿಳಿದು "ಇದೇನಾಶ್ಚರ್ಯ" ಎಂದು ಕೇಳಲು "ಪ್ರಪನ್ನನಿಗೆ ಆಕಿಂಚನ್ಯವೂ, ಅನನ್ಯಗತಿತ್ವವೂ ಬೇಕು" ಎಂಬ ಶಾಸ್ತ್ರಾರ್ಥಕ್ಕೆ ಇದೇ ದೃಷ್ಟಾಂತವು. ಅಂದರೆ ಒಬ್ಬನನ್ನು ನಂಬಿ ಅವನಿಂದಲೇ ಆ ಕೆಲಸವನ್ನು ಮಾಡಿಸಿಕೊಳ್ಳುವ ಸಂದರ್ಭದಲ್ಲಿ ಆ ಕೆಲಸ ಮಾಡಿಕೊಳ್ಳುವುದಕ್ಕೆ ತಾನು ಅಶಕ್ತನಾಗಿಯೂ, ಬೇರೊಬ್ಬರನ್ನು ಆಶ್ರಯಿಸದೇ ಇರಬೇಕು. ಇವೆರಡೂ ಇಲ್ಲದಿದ್ದರೆ ಅವನಿಂದ ಆ ಕೆಲಸವಾಗಲಾರದು. ಇದರ ಮುಖ್ಯ ಸಾರಾಂಶ- "ನಮ್ಮ ರಕ್ಷಣಕ್ಕಾಗಿ ನಾವೇ ಪ್ರಯತ್ನ ಮಾಡುತ್ತಿರುವವರಿಗೂ ದೇವರು ಕಾಪಾಡುವುದಿಲ್ಲ. ಅವನನ್ನು ಪರಿಪೂರ್ಣ ನಂಬಿ ನಮ್ಮ ಕೈಯನ್ನು ನಾವು ನಿಲ್ಲಿಸಿದರೆ ಅವನು ಸಂರಕ್ಷಿಸುವನು" ಎಂದು ವ್ಯಾಸರು ಅಪ್ಪಣೆ ಕೊಡಿಸಿದರು.

ಆ ನಾರದ ವ್ಯಾಸಾದಿ ಮಹರ್ಷಿಗಳು ಅಲ್ಲಿಂದ ಮುಂದೆ ಹೊರಟು ಅನೇಕ ದೇಶಗಳನ್ನೂ, ಪರ್ವತಗಳನ್ನೂ, ನದಿಗಳನ್ನೂ ದುರ್ಗಮವಾದ ಅರಣ್ಯಗಳನ್ನೂ ಅತಿಕ್ರಮಿಸಿ ಅಲ್ಲಲ್ಲಿರತಕ್ಕವರಿಗೆ ಧರ್ಮೋಪದೇಶಗಳನ್ನು ಮಾಡುತ್ತಾ ಉದ್ದೇಶ್ಯವಾದ ಯಾದವಗಿರಿಯನ್ನು ಹೊಂದಿ ಅಲ್ಲಿಯ ತೀರ್ಥಗಳಲ್ಲಿ ಸ್ನಾನಮಾಡಿ ಪಾಪವನ್ನೆಲ್ಲಾ ಕಳೆದು, ಆನಂದಮಯ ದಿವ್ಯ ವಿಮಾನವನ್ನು ಪ್ರವೇಶಿಸಿ ತದ್ಗರ್ಭಗೃಹಮಧ್ಯವನ್ನಲಂಕರಿಸುತ್ತಿರುವಂಥ ಆಶ್ರಿತರ ಸಂಸಾರ ಸಮುದ್ರಕ್ಕೆ ಸೇತುವಾದಂಥ ಸೌಂದರ್ಯ, ಸೌಕುಮಾರ್ಯ, ಲಾವಣ್ಯ, ಸೌಶೀಲ್ಯ, ಸೌಲಭ್ಯಾದಿ ಕಲ್ಯಾಣಗುಣಗಳಿಂದ ಅನಿರ್ವಾಚ್ಯನಾದ ಶ್ರೀಮನ್ನಾರಾಯಣನನ್ನು ದರ್ಶನ ಮಾಡಿ ವಾಙ್ಮನಸಾಗೋಚರವಾದ ಪರಮಾನಂದ ಭರಿತವಾದರು.

ಅವರುಗಳಲ್ಲಿ ಕೆಲವರು ಭಗವದ್ದರ್ಶನ ಮಾಡಿದುದರಿಂದ ಸಕಲ ಕರ್ಮಕ್ಷಯವಾಗಿ 'ಚಿನ್ತಯನ್ತಿ' ಎಂಬ ಗೋಪಿಕೆಯಂತೆ ಆಗಲೇ ಮೋಕ್ಷಹೊಂದಿದರು. ಮತ್ತೆ ಕೆಲವರು ಧ್ಯಾನಕ್ಕೆ ಶುಭಾಶ್ರಯವಾದ ಶ್ರೀಮನ್ನಾರಾಯಣನ ದಿವ್ಯ ಮೂರ್ತಿಯನ್ನು ಮನಸ್ಸಿನಲ್ಲಿ ದೃಢವಾಗಿ ಗ್ರಹಿಸಿಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ಸೇರಿದರು. ಮತ್ತೆ ಕೆಲವರು ಆ ಶ್ರೀಮನ್ನಾರಾಯಣ ಮೂರ್ತಿಯನ್ನು ಬಿಟ್ಟು ಹೋಗಲಾರದೆ ಆ ಯಾದವಾದ್ರಿಯಲ್ಲಿಯೇ ನಿತ್ಯವಾಸ ಮಾಡುತ್ತಿದ್ದು ಅವನ ನಿತ್ಯ ಕೈಂಕರ್ಯದಲ್ಲಿ ನಿರತರಾಗಿದ್ದರು. ಹೀಗೆ ಪರಾತ್ಪರನಾದ ಶ್ರೀಮನ್ನಾರಾಯಣನು ಸರ್ವಸುಲಭನಾಗಿ, ಸರ್ವಸೇವ್ಯನಾಗಿ ಅವರವರ ಇಷ್ಟಾನುಸಾರವಾಗಿ ಫಲಗಳನ್ನು ಕೊಡುತ್ತಾ ತನ್ನ ಮಹಿಮೆಗಳನ್ನು ತನ್ನ ಭಕ್ತರಲ್ಲಿ ಪ್ರಕಟ ಪಡಿಸುತ್ತಾ ಪರಮಾನಂದ ಪೂರ್ಣನಾಗಿ ಬಿಜಯಮಾಡಿಸಿರುವನು.

ಇಲ್ಲಿಗೆ ಶ್ರೀ ನಾರದೀಯ ಪುರಾಣದಲ್ಲಿ ಜ್ಞಾನ ಕಾಂಡಾಂತರ್ಗತವಾದ ಯಾದವಗಿರಿ ಮಾಹಾತ್ಮ್ಯದ ಹನ್ನೆರಡು ಅಧ್ಯಾಯಗಳ ಸಂಗ್ರಹಾರ್ಥವು ಮುಗಿಯಿತು.



# ಶ್ರೀಭಾಷ್ಯ ಪ್ರವೇಶ

---ವಿದ್ವಾನ್ 'ರಘುಸುತ'.

ಆಚಾರ್ಯ ರಾಮಾನುಜರ 'ಶ್ರೀಭಾಷ್ಯ'ವು ಭಾರತೀಯ ತತ್ವಶಾಸ್ತ್ರದ ಮಹಾಮೇರು ಕೃತಿಗಳಲ್ಲೊಂದು. ಅಂತೆಯೇ ರಾಮಾನುಜರ ಕೃತಿಗಳಲ್ಲಿ ಅತಿ ಮುಖ್ಯವಾದುದು. ಅವರ ಪ್ರಕಾಂಡ ಪಾಂಡಿತ್ಯಕ್ಕೆ ಈ ಕೃತಿ ಒಂದು ಉತ್ಕೃಷ್ಟ ಉದಾಹರಣೆ.

ಗುರು ಯಾದವ ಪ್ರಕಾಶರಲ್ಲಿ ವಿದ್ಯಾರ್ಜನೆ ಮಾಡುತ್ತಿದ್ದಾಗಲೆ ಅವರು ತತ್ವಶಾಸ್ತ್ರಕ್ಕೆ ನೀಡುತ್ತಿದ್ದ ವಿವರಗಳು ಇಷ್ಟವಾಗದೆ, ಬೇರೊಂದು ರೀತಿಯಲ್ಲಿ ಅವುಗಳನ್ನು ಅರ್ಥೈಸಿದ್ದರೆ ಹೇಗಿರುತ್ತಿತ್ತು ಎಂಬ ಯೋಚನೆ ರಾಮಾನುಜರಿಗೆ ಬಂದದ್ದರಲ್ಲಿ ಆಶ್ಚರ್ಯವೇನಿಲ್ಲ. ಇವರೊಂದಿಗೆ ಯಾಮುನರ ಅಂತಿಮೇಚ್ಛೆಯನ್ನು ತಿಳಿದ ಮೇಲೆ, ಅವರಿಗೆ ಹೊಸ ಯೋಚನೆಯೊಂದು ಹೊಳೆದು ಅದುವರೆವಿಗೆ ತಮ್ಮ ಹೃದಯದಲ್ಲಿ ಅಂಡಲೆಯುತ್ತಿದ್ದ ಭಾವನೆಗೆ ಸ್ಪಷ್ಟರೂಪ ದೊರೆತದ್ದು ಅವರಿಗೆ ನೂರು ಭುಜ ಬಂದಂತಾಯಿತು. ತಮ್ಮ ಮೇಲೆ ತಮ್ಮ ಮಾನಸಿಕ ಗುರುಗಳಾದ ಯಾಮುನರ ಅನುಗ್ರಹವಿರುವುದನ್ನು ಅರಿತ ರಾಮಾನುಜರಿಗೆ ಹೊಸ ಹುಮಸ್ಸು, ಹೊಸ ಸ್ಫೂರ್ತಿ ಬಂದಂತಾಯಿತು.

ಪರಿಣಾಮವಾಗಿ ಹೊಸ ನಿಟ್ಟಿನಲ್ಲಿ ಅವರ ಚಿಂತನೆ ಮುಂದುವರೆಯಿತು. ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳನ್ನು, ದಿವ್ಯಪ್ರಬಂಧಗಳನ್ನು ಆಳವಾಗಿ ಅಭ್ಯಾಸ ಮಾಡತೊಡಗಿದರು. ಇದಕ್ಕೆ ಪೆರಿಯನಂಬಿ, ಗೋಷ್ಠಿಪೂರ್ಣ, ಮಾಲಾಧರ, ಆಳವಂದಾಳ್ವಾನ್, ಶ್ರೀಶೈಲ ಪೂರ್ಣ ಎನ್ನುವ ಪಂಚಾಚಾರ್ಯರ ಪದಾಶ್ರಯದಿಂದ ಪಡೆದ ಉಪದೇಶಗಳನ್ನು ತಮ್ಮಲ್ಲೆ ಮಂಥಿಸತೊಡಗಿದರು. ಈ ರೀತಿಯಲ್ಲಿ ಒಬ್ಬೊಬ್ಬ ಆಚಾರ್ಯರಿಂದ ವಿಶಿಷ್ಟಾದ್ವೈತ ಸಿದ್ಧಾಂತದ ಒಂದೊಂದು ರಹಸ್ಯವನ್ನು ಒಂದೊಂದು ರೀತಿಯಲ್ಲಿ ಪಡೆದು, ಸಿದ್ಧಾಂತ ರಕ್ಷಣೆ ಪ್ರಚಾರಗಳಿಗೆ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿಕೊಂಡರು. ತಾವು ಹೊಸದಾಗಿ ಏನನ್ನೂ ಹೇಳಬೇಕಾಗಿಲ್ಲವೆಂಬುದನ್ನು ಅವರು ತಿಳಿದಿದ್ದರು. ಬ್ರಹ್ಮಸೂತ್ರಗಳಲ್ಲಿ ಅಡಕವಾಗಿರುವ ವಿಷಯ ಸಂಗ್ರಹ, ವಿವಿಧ ಟೀಕಾಚಾರ್ಯರು ಮಾಡಿರುವ ಟೀಕೆಗಳು, ನಮ್ಮಾಳ್ವಾರ್, ನಾಥಮುನಿ, ಯಾಮುನರ ಅಭಿಪ್ರಾಯಗಳು - ಇವುಗಳ ಆಧಾರದ ಮೇಲೆ ಪರಂಪರೆ ಹಾಗೂ ಸಂಪ್ರದಾಯಗಳ ಮುಖಾಂತರ ಹರಿದು ಬಂದಿರುವ ನಿಗೂಢ, ತಾತ್ವಿಕ ರಹಸ್ಯಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಲು ಆಚಾರ್ಯ ರಾಮಾನುಜರು ತೀರ್ಮಾನಿಸಿದರು.

ವೇದಗಳ ಮೂರು ಭಾಗಗಳಲ್ಲಿ ಒಂದಾದ ಆರಣ್ಯಕದಲ್ಲಿ ಆತ್ಮನ ವಿಚಾರ ಇರುವ ಭಾಗವು ಉಪನಿಷತ್ತು ಎನಿಸುತ್ತದೆ. ಇದು ವೇದದ ಕೊನೆಯ ಭಾಗವಾದುದರಿಂದ 'ವೇದಾಂತ' ಎಂದು ಕರೆಯಲಾಗುತ್ತಿದೆ. ಇದರ ಸಾರ ಭಗವದ್ಗೀತೆಯಲ್ಲೂ ಇದೆ. ಇವೆಲ್ಲವುಗಳಲ್ಲಿರುವ ತತ್ವ, ಅದರ ಸಾಧನೆ, ಪ್ರಯೋಜನ - ಇವುಗಳನ್ನು ತೀರ್ಮಾನಿಸುವ ಶಾಸ್ತ್ರವೇ 'ವೇದಾಂತ ದರ್ಶನ'. ಈ ದರ್ಶನವು ವಿವರಿಸುವ ಚಿತ್, ಅಚಿತ್, ಈಶ್ವರ - ಎಂಬ ತತ್ವಗಳ ವಿವರ ಹಾಗೂ ಅವುಗಳ ಪರಸ್ಪರ ಸಂಬಂಧಗಳನ್ನು ಸಾರವತ್ತಾಗಿ ಒಂದೆರಡು ವಾಕ್ಯಗಳಲ್ಲಿ ಸಂಕ್ಷಿಪ್ತವಾಗಿ ವಿವರಿಸುವುದೇ ವೇದಾಂತ ಸೂತ್ರಗಳ ಗುರಿ. ತತ್ವ ಎಂದರೆ ಬ್ರಹ್ಮ ಎಂದಿರುವುದರಿಂದ ಈ ಸೂತ್ರಗಳನ್ನು 'ಬ್ರಹ್ಮಸೂತ್ರ'ಗಳು ಎಂದು ಕರೆಯುತ್ತಾರೆ. ಈ ಸೂತ್ರಗಳು ಕ್ಲಿಷ್ಟವಾಗಿರುವುದರಿಂದ ಇವುಗಳ ಅರ್ಥ ವಿವರಣೆ ಅವಶ್ಯಕ. ಇಂತಹ ಅರ್ಥ ವಿವರಣೆಗಳನ್ನು ಶಂಕರ, ರಾಮಾನುಜ, ಮಧ್ವ - ಮತ್ತಿತರ ಆಚಾರ್ಯರು ತಮ್ಮದೇ ಆದ ರೀತಿಯಲ್ಲಿ ನೀಡಿರುವುದರಿಂದ ಅವನ್ನು ಆಯಾ ಆಚಾರ್ಯರ ಭಾಷ್ಯಗಳು ಎಂದು ಕರೆಯುತ್ತಾರೆ. ಶ್ರೀ ರಾಮಾನುಜರು ನೀಡಿರುವ ವಿವರಣೆಯನ್ನು ರಾಮಾನುಜ ಭಾಷ್ಯ ಅಥವಾ 'ಶ್ರೀ ಭಾಷ್ಯ' ಎಂದು ಕರೆಯುತ್ತಾರೆ. ಶ್ರೀ ಭಾಷ್ಯವು ಬ್ರಹ್ಮಸೂತ್ರಗಳಿಗೆ ಬರೆದ ವ್ಯಾಖ್ಯಾನವಾದುದರಿಂದ ಬ್ರಹ್ಮಸೂತ್ರಗಳ ವಿಭಾಗ ಕ್ರಮವನ್ನು ಪರಿಶೀಲಿಸುವುದು ಅಗತ್ಯ.

ಇವರಲ್ಲಿನ ಪ್ರಥಮಾಧ್ಯಾಯವನ್ನು 'ಸಮನ್ವಯಾಧ್ಯಾಯ'ವೆಂತಲೂ, ದ್ವಿತೀಯಾಧ್ಯಾಯವನ್ನು 'ಅವಿರೋಧಾಧ್ಯಾಯ'ವೆಂತಲೂ, ತೃತೀಯಾಧ್ಯಾ



*******************

ತಿರುಮಲೆ - ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.

*******************

ಯವನ್ನು 'ಸಾಧನಾಧ್ಯಾಯ'ವೆಂತಲೂ, ಚತುರ್ಥಾಯಾಧ್ಯಾಯವನ್ನು 'ಫಲಾಧ್ಯಾಯ'ವೆಂತಲೂ ಕರೆಯುತ್ತಾರೆ.

ವೇದ, ವೇದಾಂಗ, ವೇದಾಂತದರ್ಶನಗಳನ್ನು ಆಳವಾಗಿ ಅಧ್ಯಯನ ಮಾಡಿದ ವೇದವ್ಯಾಸರು ಇವುಗಳಿಗೆ ಅನ್ವಯವಾಗುವ 'ಬ್ರಹ್ಮಸೂತ್ರ'ಗಳನ್ನು ರಚಿಸಿದರು. ಆದರೆ ಕಾಲಾನಂತರ ಈ 'ಬ್ರಹ್ಮಸೂತ್ರ'ಗಳಿಗೂ ವಿವರಣೆಗಳು ಬೇಕಾದುದರಿಂದ ವ್ಯಾಸರ ಆಂತರ್ಯ, ಅಭಿಪ್ರಾಯಗಳನ್ನು ಚೆನ್ನಾಗಿ ತಿಳಿದಿದ್ದ ಅವರ ಪಟ್ಟಶಿಷ್ಯರಾದ ಬೋಧಾಯನರು 'ವೃತ್ತಿ' ಎನ್ನುವ ವ್ಯಾಖ್ಯಾನವನ್ನು ಬರೆದರು. ಇದು ವಿಶಿಷ್ಟಾದ್ವೈತ ಪರವಾದುದು ಎಂಬುದು ಗಮನಿಸಬೇಕಾದ ವಿಷಯ. ವಾಕ್ಯಕಾರರು ಇದಕ್ಕೂ ಸಂಗ್ರಹವಾಗಿ ವ್ಯಾಖ್ಯಾನವೊಂದನ್ನು ಬರೆದರು. ಈ ರೀತಿಯಲ್ಲಿ ಬ್ರಹ್ಮನಂದಿ ಅಥವಾ ಟಂಕರು ಬರೆದ ಈ ಸಂಗ್ರಹ ವ್ಯಾಖ್ಯಾನವನ್ನು 'ವಾಕ್ಯ' ಎಂದು ಕರೆದರು. ಇದಕ್ಕೆ ನೈಧ್ರುವ ಮಾಡಪೂಶಿ ಆಳ್ವಾನ್ ಎಂದು ಕರೆಯಲ್ಪಡುವ ದ್ರಮಿಡಾಚಾರ್ಯರು ಸಂಗ್ರಹವಾಗಿ ಭಾಷ್ಯವೊಂದನ್ನು ಬರೆದರು. ಗುಹದೇವ, ಭಾರುಚಿ, ಕಪರ್ದಿ - ರವರುಗಳೂ ಕೂಡ ಇದೇ ರೀತಿಯ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಇವುಗಳ ಆಧಾರದ ಮೇಲೆ 'ಶ್ರೀಭಾಷ್ಯ'ವನ್ನು ರಚಿಸಲಾಗಿದೆ. ಆಚಾರ್ಯ ರಾಮಾನುಜರೇ ಈ ಗ್ರಂಥದ ಪ್ರಾರಂಭದಲ್ಲಿ ಮಂಗಳ ಶ್ಲೋಕದಲ್ಲಿ ಹೇಳಿರುವಂತೆ --

ಅಖಿಲ ಭುವನ ಜನ್ಮಸ್ಥೇಮ ಭಂಗಾದಿಲೀಲೇ
ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೇ
ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿ
ರೂಪಾ

'ಭಗವದ್ಬೋಧಾಯನ ಟಂಕ ದ್ರಮಿಡ ಗುಹದೇವ ಕಪರ್ದಿಭಾರುಚಿ ಪ್ರಭೃತ್ಯ ವಿಗೀತ ಶಿಷ್ಟ ಪರಿಗೃಹೀತ ಪುರಾತನ ವೇದ ವೇದಾಂತ ವ್ಯಾಖ್ಯಾನ ಸುವ್ಯಕ್ತಾರ್ಥ ಶ್ರುತಿ ನಿಕರದರ್ಶಿಸೋಯಂ ಪಂಥಾಃ'

ಎಂಬಂತೆ ಬೋಧಾಯನ (ಉಪವರ್ಷ)ರ ಬ್ರಹ್ಮಸೂತ್ರ ವೃತ್ತಿ, ವಾಕ್ಯ - ದ್ರಮಿಡರ ಸಂಕ್ಷೇಪ ಭಾಷ್ಯ ಗುಹದೇವ, ಭಾರುಚಿ, ಕಪರ್ದಿಗಳ ವ್ಯಾಖ್ಯಾನ, ನಾಥಮುನಿಗಳ ನ್ಯಾಯತತ್ತ್ವ, ಯಾಮುನಾಚಾರ್ಯರ ಸಿದ್ಧಿತ್ರಯ, ಆಗಮ ಪ್ರಾಮಾಣ್ಯ - ಇವುಗಳನ್ನು ಆಧಾರವಾಗಿ ಇಟ್ಟುಕೊಂಡು, ಅವುಗಳಲ್ಲಿನ ಸಾಲುಗಳನ್ನು ಉದಾಹರಿಸುತ್ತಾ, ಪ್ರಮಾಣೀಕರಿಸಿ, 'ಶ್ರೀ ಭಾಷ್ಯ'ವನ್ನು ರಚಿಸಿದರು. ಈ ಗ್ರಂಥವು ಬ್ರಹ್ಮವಿಚಾರವಾದ ಶಾಸ್ತ್ರವಾದುದರಿಂದ 'ಬ್ರಹ್ಮಮೀಮಾಂಸ'ವೆಂದೂ, ಆತ್ಮನೇ ಶರೀರವಾಗಿ, ಆ ಶರೀರದಲ್ಲಿರುವ ಬ್ರಹ್ಮತ್ವವನ್ನು ಕುರಿತು ವಿಚಾರ ಮಾಡುವುದರಿಂದ ಇದಕ್ಕೆ 'ಶಾರೀರಿಕ ಮೀಮಾಂಸ'ವೆಂದೂ ಹೆಸರು ಬಂದಿದೆ.

ಬಹುಶಃ ಮೇಲೆ ತಿಳಿಸಿದ ವ್ಯಾಖ್ಯಾನಗಳು ಖಿಲವಾಗಿ, ಕಾಶ್ಮೀರದ ಶಾರದಾ ಪೀಠದಲ್ಲಿ ಬೋಧಾಯನ ವೃತ್ತಿ ಇದ್ದುದನ್ನು ತಿಳಿದ ಆಚಾರ್ಯ ರಾಮಾನುಜರು ತಮ್ಮ ಪ್ರಿಯ ಶಿಷ್ಯರಾದ ಕೂರೇಶರೊಂದಿಗೆ ಕಾಶ್ಮೀರಕ್ಕೆ ಹೋಗಿ, ಅಲ್ಲಿನ ವಿದ್ವಾಂಸರನ್ನು ಜಯಿಸಿ, ಬೋಧಾಯನ ವೃತ್ತಿಯನ್ನು ಒಮ್ಮೆ ವೀಕ್ಷಿಸಲು ಅನುಮತಿ ಪಡೆದು, ಏಕ ಸಂಧಿಗ್ರಾಹಿಯಾದ ಕೂರೇಶರ ಮುಖಾಂತರ 'ಬೋಧಾಯನ ವೃತ್ತಿ'ಯನ್ನು ಪಡೆದು, ಅದನ್ನು ಅನುಸರಿಸಿ, ಶ್ರೀ ಭಾಷ್ಯವನ್ನು ರಚಿಸಿದುದಾಗಿ ರಾಮಾನುಜರು ತಮ್ಮ ಮಹತ್ಕೃತಿಯ ಪ್ರಾರಂಭದಲ್ಲಿ ತಿಳಿಸಿದ್ದಾರೆ.

ಹೀಗೆ ವಿಸ್ತಾರವಾಗಿ, ಪರಿಪೂರ್ಣವಾಗಿ ರಚಿಸಲ್ಪಟ್ಟಿರುವ ವಿವರಣೆಗಳ ಮುಖಾಂತರ ರಾಮಾನುಜರು ವಿಷ್ಣು ಪಾರಮ್ಯವನ್ನು ಸ್ಪಷ್ಟಪಡಿಸಿದ್ದಾರೆ. ಇದೇ ವಿಶಿಷ್ಟಾದ್ವೈತ ಸಿದ್ಧಾಂತ (ರಾಮಾನುಜದರ್ಶನ) ಎಂಬ ಹೆಸರು ಪಡೆಯಿತು. ಈ ಸಿದ್ಧಾಂತವು ಉಪನಿಷತ್ತು, ವಿಷ್ಣುಪುರಾಣ, ಮಹಾಭಾರತ, ಬೋಧಾಯನ ವೃತ್ತಿ, ನಾಥಮುನಿ, ಯಾಮುನಮುನಿಗಳ ಮುಖಾಂತರ ಹರಿದು ಬಂದು, ಶ್ರೀಭಾಷ್ಯದಲ್ಲಿ ಸುಭದ್ರವಾಗಿ ನೆಲೆಯೂರಿದೆ. ಇದರಲ್ಲಿ ಸಂಪ್ರದಾಯದ ಜಾಡನ್ನೇ ಹಿಡಿದು ಹಳೆಯ ಅರ್ಥವನ್ನು ಹೊಸರೀತಿಯಲ್ಲಿ ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ. ಪರಿಣಾಮವಾಗಿ ಈ ಕೃತಿಯು ಸಾರಾಸಾರ ವಿವೇಕ, ಪ್ರಮಾಣ ಶೀಲತೆ ಸರ್ವಶಾಸ್ತ್ರ ವಿಮರ್ಶೆಯ ಲಕ್ಷಣಗಳನ್ನು ಹೊಂದಿದ್ದು, ರಾಮಾನುಜ ಸಿದ್ಧಾಂತದ ಶಿಖರಪ್ರಾಯ ಕೃತಿ ರತ್ನವಾಗಿದೆ.

ಆಚಾರ್ಯ ರಾಮಾನುಜರು ಈ ಕೃತಿಯಲ್ಲಿ ಅದ್ವೈತ ದರ್ಶನವನ್ನು ವಿಸ್ತಾರವಾಗಿ ಪರೀಕ್ಷಿಸಿ, ನಿರ್ವಿಶೇಷ ಬ್ರಹ್ಮವಾದವನ್ನು ತಳ್ಳಿಹಾಕಿ, ಚಿದ ಚಿದೀಶ್ವರರಿಗೆ ಭೇದವನ್ನು ಶ್ರುತಿ, ಸ್ಮೃತಿ, ಇತಿಹಾಸಗಳ ಪ್ರಮಾಣಗಳ ಆಧಾರದ ಮೇಲೆ ಸ್ಥಾಪಿಸಿದ್ದಾರೆ. ಭಗವಂತನ ಉಪಾಸನೆಯಿಂದ ಪಾರಮಾರ್ಥಿಕ ಬಂಧವನ್ನು ಹೋಗಲಾಡಿಸಿಕೊಳ್ಳಬಹುದು - ಎಂಬುದನ್ನು ಒತ್ತಿ ಹೇಳಿದ್ದಾರೆ. ಮೋಕ್ಷವನ್ನು ಭಗವಂತನ ಅನುಭವದ ಮಹದಾನಂದದಿಂದ ಪಡೆಯಬಹುದು ಎಂಬುದನ್ನು ಪ್ರತಿಪಾದಿಸಿದ್ದಾರೆ.

ನಾಲ್ಕು ಅಧ್ಯಾಯಗಳಿಂದ ಕೂಡಿರುವ ಶ್ರೀಭಾಷ್ಯದಲ್ಲಿ ೧೬ ಪಾದಗಳಿದ್ದು, ೧೫೬ ಅಧಿಕರಣಗಳಿರುವುದರಿಂದ ಪ್ರತಿಯೊಂದು ಅಧಿಕರಣದ

ಲ್ಲಿಯೂ ಐದು ವಿಷಯ ವಿಭಾಗಗಳಿವೆ. ಅವು ಯಾವುವೆಂದರೆ - ೧) ವಿಷಯ ವಾಕ್ಯ ನಿರೂಪಣ, ೨) ಸಂಶಯ, ೩) ಪೂರ್ವ ಪಕ್ಷ ಮತ್ತು ಉತ್ತರ ಪಕ್ಷ, ೪) ಸಿದ್ಧಾಂತ, ೫) ಪ್ರಯೋಜನ. ಈ ಪ್ರಕಾರ ಐದು ಭಾಗಗಳನ್ನೂ ಪ್ರತಿ ಅಧಿಕರಣಗದಲ್ಲೂ ವಿಚಾರ ಮಾಡಿ, ಆಯಾ ಪಾದಗಳಲ್ಲಿರುವ ಅಧಿಕರಣಗಳ ಅರ್ಥ ಪರಿಶೀಲನೆಯಿಂದ ಆಯಾ ಪಾದದ ಮುಖ್ಯಾರ್ಥವನ್ನು ಸಂಗ್ರಹಿಸಲಾಗಿದೆ. ಪೂರ್ವಾಚಾರ್ಯರ ಈ ಕ್ರಮವನ್ನೇ ರಾಮಾನುಜರೂ ಅನುಸರಿಸಿದ್ದಾರೆ. ಈ ೧೬ ಪಾದಗಳಲ್ಲಿ ೧೬ ಭಗವದ್ಗುಣಗಳನ್ನು ವಿವರಿಸಲಾಗಿದೆ.

## ಮೊದಲ ಅಧ್ಯಾಯ

## ಸಮನ್ವಯಾಧ್ಯಾಯ

ಈ ಅಧ್ಯಾಯದಲ್ಲಿ ಜಗತ್ಕಾರಣ ವಸ್ತುವು ಶ್ರೀಮನ್ನಾರಾಯಣ ರೂಪಿಯಾದ ಪರಮಾತ್ಮನೇ ಎಂದು ನಿರೂಪಿಸಲಾಗಿದೆ. ಶ್ರುತಿ ಸಮನ್ವಯ ಪ್ರತಿಪಾದಕವಾದುದರಿಂದ ಇದನ್ನು 'ಸಮನ್ವಯಾಧ್ಯಾಯ' ಎಂದು ಕರೆಯಲಾಗಿದೆ.

ಇದರ ಮೊದಲನೇ ಪಾದದಲ್ಲಿ ಅಸ್ಪಷ್ಟ ತರ ಜೀವಲಿಂಗಕ ವಾಕ್ಯಗಳ ವಿವೇಚನೆ ಇದೆ. ಇದರಲ್ಲಿ ಸಕಲ ಪ್ರಪಂಚವನ್ನೂ ಸೃಷ್ಟಿಸಿರುವವನು ಪರಬ್ರಹ್ಮನು (ಸ್ರಷ್ಟಾ) ಎನ್ನುವ ಗುಣವನ್ನು ವಿವರಿಸಲಾಗಿದೆ. ಪ್ರಕೃತಿ (ಅಚಿತ್) ಮತ್ತು ಪುರುಷ (ಜೀವಾತ್ಮಾ) ಎಂಬ ಎರಡು ತತ್ವಗಳಲ್ಲಿ ಯಾವುದಾದರೂ ಜಗತ್ಕಾರಣವಸ್ತುವೆಂದು ವೇದಾಂತ ಶಾಸ್ತ್ರವು ಪ್ರತಿಪಾದಿಸುತ್ತದೆ ಎಂಬುದಾಗಿ ಅಸ್ಪಷ್ಟತರವಾದ ಕೆಲವು ವಾಕ್ಯಗಳ ಮೂಲಕ ಪೂರ್ವಪಕ್ಷ ಮಾಡಿ, ಅದನ್ನು ಖಂಡಿಸಿ, ಸರ್ವಜ್ಞನೂ, ಸತ್ಯಸಂಕಲ್ಪನೂ, ನಿರ್ದೋಷನೂ, ಸಮಸ್ತ ಕಲ್ಯಾಣ ಗುಣ ಕಾರಕನೂ ಆದ ಶ್ರೀಮನ್ನಾರಾಯಣನೇ ಜಗತ್ಕಾರಣನು ಎಂಬುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

ಎರಡನೇ ಪಾದದಲ್ಲಿ ಅಸ್ಪಷ್ಟ ಜೀವಾದಿ ವಾಕ್ಯ ವಿವೇಚನೆ ಇದೆ. ಪರಮಾತ್ಮನೇ ವಿಶ್ವವನ್ನು ಶರೀರವನ್ನಾಗಿ ಹೊಂದಿದ್ದಾನೆ ಎನ್ನುವ ದೇಹೀ ಎನ್ನುವ ಗುಣವನ್ನು ವಿವರಿಸಲಾಗಿದೆ. ಪ್ರಕೃತಿ ಪುರುಷ ಪರವೆಂಬ ಸೂಚನೆಯು ಅಸ್ಪಷ್ಟವಾಗಿರುವ ವಾಕ್ಯಗಳ ಅರ್ಥ ವಿಚಾರವನ್ನು ಇಲ್ಲಿ ಮಾಡಲಾಗಿದೆ.

ಮೂರನೇ ಪಾದದಲ್ಲಿ ಸ್ಪಷ್ಟ ಜೀವಾದಿ ಲಿಂಗಕ ವಾಕ್ಯವಿವೇಚನೆಯಿದೆ. ಇಲ್ಲಿ ಸಂಸಾರಿ - ಮುಕ್ತ - ನಿಷ್ಠ ಎಂಬ ಮೂರು ವಿಧವಾದ ಆತ್ಮಗಳನ್ನು ಧರಿಸಿರುವ ಅನನ್ಯಾಧಾರನು - (ಸ್ವನಿಷ್ಠ) ಎನ್ನುವ ಪರಮಾತ್ಮನ ಗುಣವನ್ನು ವಿವರಿಸಲಾಗಿದೆ. ಇಲ್ಲಿ ಪ್ರಕೃತಿ - ಪುರುಷ - ಪರಗಳ ಸೂಚನೆಯು ಸ್ಪಷ್ಟವಾಗಿರುವ ವಾಕ್ಯಗಳ ವಿವರಣೆಯನ್ನು ನೀಡಲಾಗಿದೆ.

ನಾಲ್ಕನೆಯ ಪಾದದಲ್ಲಿ ಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯವಿವೇಚನೆಯಿದೆ. ಪರಮಾತ್ಮನು ಎಲ್ಲೆಯಿಲ್ಲದ ಮಹಿಮೆಯುಳ್ಳವನು ಎನ್ನುವ ಭಗವಂತನ ನಿರವಧಿ ಮಹಿಮಾ ಗುಣವನ್ನು ಇಲ್ಲಿ ವಿವರಿಸಲಾಗಿದೆ. ಅಂತೆಯೇ ಪ್ರಕೃತಿ - ಪುರುಷ - ಪರಗಳ ಸೂಚನೆಯು ಸ್ಪಷ್ಟಪರವಾಗಿ ತೋರುವ ವಾಕ್ಯಗಳ ಅರ್ಥ ವಿಚಾರವನ್ನು ಇಲ್ಲಿ ವಿವರಿಸಲಾಗಿದೆ.

## ಎರಡನೇ ಅಧ್ಯಾಯ

## ಅವಿರೋಧಾಧ್ಯಾಯ

ಮೊದಲನೇ ಅಧ್ಯಾಯದಲ್ಲಿ ಪ್ರತಿಪಾದಿಸಿದ ವಿಷಯಗಳು ಇತರ ಪಕ್ಷಗಳಿಗೆ ವಿರುದ್ಧವಲ್ಲ ಎಂಬುದನ್ನೂ, ಪರಬ್ರಹ್ಮನಿರ್ಧಾರಣ ವಿಷಯದಲ್ಲಿ ಇತರ ಮತಗಳಲ್ಲಿರುವ ಶಾಸ್ತ್ರಗಳೆಲ್ಲ ಅಸಮಂಜಸ ಹಾಗೂ ಅನಾದರಣೀಯ ಆಗಿವೆ ಎಂಬುದನ್ನು ಇಲ್ಲಿ ಚರ್ಚಿಸಿ, ಸಿದ್ಧಾಂತ ಮಾಡಲ್ಪಟ್ಟಿವೆ.

ಇದರಲ್ಲಿನ ಮೊದಲೇ ಪಾದವು 'ಸ್ಮೃತಿ ಪಾದ'ವಾಗಿದೆ. ಜಗತ್ಕಾರಣನಾದ ಆ ಪರಮಾತ್ಮನು ಯಾರಿಂದಲೂ ಬಾಧಿಸಲ್ಪಡದವನಾಗಿದ್ದಾನೆ. (ಅಪಾಸ್ತ ಬಾಧಃ) ಎನ್ನುವ ಭಗವದ್ಗುಣವನ್ನು ವಿವರಿಸಲಾಗಿದೆ. ಸಖ್ಯಾದಿ ಸ್ಮೃತಿ ವಿರೋಧದಿಂದಲೂ ನ್ಯಾಯ ವಿರೋಧದಿಂದಲೂ ಪ್ರಸಕ್ತವಾದ ದೋಷಗಳು ಪರಿಹರಿಸಲ್ಪಟ್ಟಿವೆ.

ಎರಡನೇ ಪಾದವು 'ತರ್ಕಪಾದ'ವಾಗಿದೆ. ಪರಮಾತ್ಮನು ಆಶ್ರಿತರಾದವರಿಗೆ ಆಪ್ತನು ಎನ್ನುವ (ಆಶ್ರಿತಾಪ್ತಃ) ಎನ್ನುವ ಭಗವದ್ಗುಣವನ್ನು ಇಲ್ಲಿ ವಿವರಿಸಲಾಗಿದೆ. ಪ್ರತಿಪಕ್ಷ ತರ್ಕಗಳ ಖಂಡನವು ವೇದಾಂತ ವಾಕ್ಯಾನುಸಾರಿಗಳಾದ ಸತ್ತರ್ಕಗಳ ಮೂಲಕ ಮಾಡಲ್ಪಟ್ಟಿದೆ.

ಮೂರನೇ ಪಾದವು 'ವಿಯತ್ಪಾದ'ವಾಗಿದೆ. ಪರಮಾತ್ಮನು ಪಂಚಭೂತಗಳಿಗೆ ಹಾಗೂ ಜೀವಾತ್ಮರ ಸ್ವರೂಪ ಸ್ವಭಾವಗಳ ವಿಕಾರಕ್ಕೆ ಕಾರಣನಾದವನು (ಖಾತ್ಮಾದೇ ಉಚಿತ ಜನಕೃತ್) ಎನ್ನುವ ಭಗವದ್ಗುಣವನ್ನು ವಿವರಿಸಲಾಗಿದೆ. ಆಕಾಶಾದಿ ಪದಾರ್ಥಗಳು ಪರಮಾತ್ಮ ಸೃಷ್ಟವೆಂದು ನಿರೂಪಿಸಿ, ಅವುಗಳಿಗೆ ಕಾರಣತ್ವ ಇಲ್ಲವೆಂದು ನಿಶ್ಚಯಿಸಲ್ಪಟ್ಟಿದೆ.

'ಪ್ರಾಣಪಾದ'ವು ನಾಲ್ಕನೇ ಪಾದವಾಗಿದೆ. ಆ ಶ್ರೀಮನ್ನಾರಾಯಣನೇ ಇಂದ್ರಿಯಗಳಿಗೆ ಕಾರಣನಾದವನು (ಇಂದ್ರಿಯಾದೇಃ ಉಚಿತ ಜನಕೃತ್) ಎನ್ನುವ ಗುಣವನ್ನು ವಿವರಿಸಲಾಗಿದೆ. ಇಂದ್ರಿಯಾದಿ ಪದಾರ್ಥಗಳು ಪರಮಾತ್ಮ ಸೃಷ್ಟಿ ಎಂದು ನಿರೂಪಿಸಿ, ಅವುಗಳಿಗೆ ಕಾರಣತ್ವವು ಇಲ್ಲ ಎಂದು ಇಲ್ಲಿ ನಿರ್ಧರಿಸಲ್ಪಟ್ಟಿದೆ.

## ಮೂರನೇ ಅಧ್ಯಾಯ

## ಸಾಧನಾಧ್ಯಾಯ

ಇದನ್ನು 'ಉಪಾಸನಾಧ್ಯಾಯ'ವೆಂದೂ ಕರೆಯಲಾಗುತ್ತದೆ. ಇದರಲ್ಲಿ ಮೋಕ್ಷಸಾಧನೆಯ ವಿವರಗಳನ್ನು ನೀಡಲಾಗಿದೆ. ಉಪಾಯ ಸ್ವರೂಪವಾದ ಉಪಾಸನೆ ಅಥವಾ ಭಕ್ತಿಯ ವಿಷಯವು ಸಿದ್ಧಾಂತ ಮಾಡಲ್ಪಟ್ಟಿದೆ.

ಇದರಲ್ಲಿನ ಮೊದಲನೇ ಪಾದವು 'ಜೀವ ದೋಷ ಪಾದ'ವಾಗಿದೆ. ಇದರಲ್ಲಿ 'ಸಂಸ್ಕೃತೇ ತಂತ್ರವಾಹೀ' ಎನ್ನುವ ಭಗವದ್ಗುಣವನ್ನು ವಿವರಿಸಲಾಗಿದೆ. ಈ ಸಂಸಾರವನ್ನು ನಡೆಸಲು ಆತನು ಅವಶ್ಯವಾದ ಸಂಕಲ್ಪ ಉಳ್ಳವನು. ಅಂದರೆ ಜಾಗ್ರದಾದ್ಯವಸ್ಥೆಗಳಿಗೆ ವಶ್ಯನಾಗಿರುವ ಸಂಸಾರಿ ಚೇತನನ ದೋಷಗಳು ನಿರೂಪಿಸಲ್ಪಟ್ಟಿವೆ.

ಎರಡನೇ ಪಾದವು 'ಉಭಯಲಿಂಗಪಾದ'ವಾಗಿದೆ. ಇದರಲ್ಲಿ 'ನಿರ್ದೋಷತ್ವಾದಿರಮ್ಯಃ' ಎನ್ನುವ ಭಗವದ್ಗುಣವನ್ನು ವಿವರಿಸಲಾಗಿದೆ. ಚೇತನ - ಅಚೇತನಗಳಲ್ಲೆಲ್ಲ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷ ಅಂಟದಿರುವವನು ಪರಮಾತ್ಮ ಎಂಬುದನ್ನು ನಿರೂಪಿಸಲಾಗಿದೆ. ಪುರುಷೋತ್ತಮನಾದ ಪರಮಾತ್ಮನು ಅಖಿಲ ಹೇಯ ಪ್ರತ್ಯನೀಕನಾಗಿಯೂ, ಸಕಲ ಕಲ್ಯಾಣ ಗುಣಾಕರನಾಗಿಯೂ ಇದ್ದಾನೆಂಬುದನ್ನು ಈ ಪಾದದಲ್ಲಿ ನಿರೂಪಿಸಲ್ಪಟ್ಟಿದೆ.

'ಗುಣೋಪ ಸಂಹಾರಪಾದ'ವು ಮೂರನೇ ಪಾದವಾಗಿದೆ. 'ಬಹುಜನಪದಂ' ಎನ್ನುವ ಪರಮಾತ್ಮನ ಗುಣವನ್ನು ಇಲ್ಲಿ ವಿವರಿಸಲಾಗಿದೆ. ಹಲವು ವಿಧವಾದ ಧ್ಯಾನ ಉಪಾಸನೆಗಳಿಗೆ ಪರಮಾತ್ಮನು ಹೇಗೆ ವಿಷಯ ಲಕ್ಷ್ಯ ಆಗಿರುವನು ಎಂಬುದನ್ನಿಲ್ಲಿ ವಿವರಿಸಲಾಗಿದೆ. ಪರಮಾತ್ಮನ ಉಪಾಸಾತ್ಮಕವಾದ ಸಾದನಗಳ ವಿವರಗಳಿಲ್ಲಿವೆ.

ನಾಲ್ಕನೇ ಪಾದವು 'ಪುರುಷಾರ್ಥಪಾದ'ವಾಗಿದೆ. 'ಸ್ವಾರ್ಹಕರ್ಮ ಪ್ರಸಾದ್ಯಃ' ಎನ್ನುವ ಭಗವದ್ಗುಣವನ್ನು ಈ ಪಾದದಲ್ಲಿ ವಿವರಿಸಲಾಗಿದೆ. ವರ್ಣಾಶ್ರಮ ಧರ್ಮಗಳ ಅನುಷ್ಠಾನದಿಂದ ಆತನು ಸಂತೋಷಗೊಳ್ಳುವನು ಎಂಬುದನ್ನಿಲ್ಲಿ ವಿವರಿಸಲಾಗಿದೆ. ವರ್ಣಾಶ್ರಮ ಧರ್ಮಾದಿ ಸಾಧನಾಂಗಗಳು ವರ್ಣಿಸಲ್ಪಟ್ಟಿದೆ.

## ನಾಲ್ಕನೇ ಅಧ್ಯಾಯ

## ಫಲಾಧ್ಯಾಯ

ಈ ಅಧ್ಯಾಯದಲ್ಲಿ ಮೋಕ್ಷ ಸ್ವರೂಪ ಹಾಗೂ ಮೋಕ್ಷಾನುಭವ ವಿಷಯವು ಹೇಳಲ್ಪಟ್ಟಿದೆ.



## ಸಪ್ತಗಿರಿ
## ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯದೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಬ್ರಹ್ಮೋಪಾಸನದ ಫಲವು ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷಸಿದ್ಧಿಯನ್ನು ವಿವರಿಸಲಾಗಿದೆ.

ಇದರಲ್ಲಿನ ಮೊದಲನೇ ಪಾದವನ್ನು 'ಆವೃತ್ತಿ ಪಾದ'ವೆಂದು ಕರೆಯುತ್ತಾರೆ. ಇದರಲ್ಲಿ 'ಪಾಪ ಚ್ಛಿತ್' ಎನ್ನುವ ಭಗವದ್ಗುಣವನ್ನು ವಿವರಿಸಲಾಗಿದೆ. ಇಲ್ಲಿ ಪರಮಾತ್ಮನು ಉಪಾಸಿಸುವ ಚೇತನರಲ್ಲಿ ಇರುವ ಪುಣ್ಯಪಾಪಗಳೆಂದು ಕರೆಯುವ ಸಕಲ ವಿಧವಾದ ಕರ್ಮಗಳನ್ನೂ ನಾಶಮಾಡುವ ದೃಢ ಸಂಕಲ್ಪವುಳ್ಳವನಾಗಿರುತ್ತಾನೆ. ಉಪಾಸನೆಯ ಅನುಷ್ಠಾನ ಪ್ರಕಾರ ಹಾಗೂ ವಿದ್ಯಾ ಮಹಾತ್ಮೆಗಳು ಇಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ಎರಡನೇ ಪಾದವು 'ಉತ್ಕ್ರಾಂತಿಪಾದ'ವಾಗಿದೆ. ಉಪಾಸಕನಾದ ಮುಮುಕ್ಷು ಚೇತನನ ಉತ್ಕ್ರಾಂತಿ ಪ್ರಕಾರವನ್ನು ಇದರಲ್ಲಿ ವಿವರಿಸಲಾಗಿದೆ. 'ಬ್ರಹ್ಮನಾಡೀಗತಿ ಕೃತ್' ಎನ್ನುವ ಭಗವದ್ಗುಣವನ್ನು ಈ ಪಾದದಲ್ಲಿ ವಿವರಿಸಲಾಗಿದೆ. ಆದರೆ ಪರಮಾತ್ಮನು ಮೋಕ್ಷ ಮಾರ್ಗಕ್ಕೆ ಮುಖ್ಯದ್ವಾರವಾದ ಬ್ರಹ್ಮನಾಡಿಯಲ್ಲಿ ಜೀವನು ಪ್ರವೇಶಿಸುವಂತೆ ಮಾಡಬಲ್ಲವನಾಗಿದ್ದಾನೆ.

'ಅರ್ಚಿರಾದಿಪಾದ'ವು ಈ ಅಧ್ಯಾಯದ ಮೂರನೇ ಪಾದವಾಗಿದೆ. ಅದರಿಂದ ಅರ್ಚಿರಾದಿ ಮಾರ್ಗಗಮನವು ಇದರಲ್ಲಿ ವಿವರಿಸಲ್ಪಟ್ಟು, ಅರ್ಚಿರಾದಿ ಮಾರ್ಗದಿಂದಲೇ ಬ್ರಹ್ಮಪ್ರಾಪ್ತಿ ಎಂಬುದನ್ನು ನಿರೂಪಿಸಲಾಗಿದೆ. ಇದರಲ್ಲಿ 'ಅತಿವಹನ್' ಎನ್ನುವ ಭಗವದ್ಗುಣವನ್ನು ನಿರೂಪಿಸಲಾಗಿದೆ. ಇದರ ಮುಖಾಂತರ ಪರಮಾತ್ಮನು ಜೀವನನ್ನು ವೈಕುಂಠಲೋಕಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ತನ್ನನ್ನು ಅನುಭವಿಸುವಂತೆ ಮಾಡಬಲ್ಲನು.

'ಮುಕ್ತಿಪಾದ'ವೇ ಈ ಅಧ್ಯಾಯದ ನಾಲ್ಕನೇ ಪಾದ. ಮುಕ್ತನಿಗೆ ಉಂಟಾಗುವ ಬ್ರಹ್ಮಾನುಭವ ಪ್ರಕಾರವು ಇಲ್ಲಿ ನಿರೂಪಿಸಲ್ಪಟ್ಟಿದೆ. 'ಸಾಮ್ಯದ' ಎನ್ನುವ ಭಗವದ್ಗುಣವನ್ನು ಇಲ್ಲಿ ವಿವರಿಸಲಾಗಿದೆ. ಪರಿಣಾಮವಾಗಿ ಪರಮಾತ್ಮನು ಆತ್ಮಸಾಮ್ಯದೊಂದಿಗೆ ತನ್ನ ಸಕಲಾನಂದವನ್ನೂ ನೀಡುವವನಾಗುತ್ತಾನೆ.

ಈ ರೀತಿಯಲ್ಲಿ ಆಚಾರ್ಯ ರಾಮಾನುಜರು ತಮ್ಮ ಈ ಮೇರು ಕೃತಿಯಲ್ಲಿ ಪರಮಾತ್ಮನು ನಿರ್ವಿಶೇಷನಲ್ಲ, ಸಗುಣನು, ಸಾಕಾರನು ಎಂದು ಸಾಧಿಸಿ ತೋರಿಸಿದ್ದಾರೆ. ಇದೇ ಶ್ರೀ ಭಾಷ್ಯದ ಪರಮಗುರಿಯೂ ಆಗಿದೆ. ಈ ಗುರಿಯನ್ನು ತಲುಪಲು ರಾಮಾನುಜರು ಜಿಜ್ಞಾಸಾಧಿಕರಣವನ್ನು ವಿಸ್ತರಿಸಿರುವುದೇ ಸಾಕ್ಷಿ. ೧೫೬ ಅಧಿಕರಣಗಳನ್ನು ಒಳಗೊಂಡ ಶ್ರೀ ಭಾಷ್ಯದ ಆರನೇ ಒಂದು ಭಾಗವನ್ನು ಈ ಅಧಿಕರಣವೊಂದೇ ಆಕ್ರಮಿಸಿರುವುದು. ಇದಕ್ಕೆ ಉದಾಹರಣೆಯಾಗಿದೆ.

ಆಚಾರ್ಯ ರಾಮಾನುಜರು ಜೀವಿಸಿದ್ದ ಕಾಲ

ಲವಾಗಿತ್ತು. ಅದರ ಪ್ರಭಾವ ಕಡಿಮೆ ಮಾಡದಿದ್ದರೆ ವೇದೋಪನಿಷತ್ತುಗಳು ಅರ್ಥಶೂನ್ಯವಾಗುತ್ತಿದ್ದವು. ಉಪಾಯ - ಉಪೇಯ ಸ್ವರೂಪಗಳಿಂದ ಪರಮಾತ್ಮನು ನಿರ್ವಿಶೇಷನು, ನಿರ್ಗುಣನು, ನಿರಾಕಾರನೆಂದು ಸಾಧಿಸಲ್ಪಡುತ್ತದೆ. ಇದು ಉಪನಿಷತ್ತುಗಳಲ್ಲಿ ಹೇಳಿದೆ ಎಂಬುದು ನಿರ್ವಿಕಾರ ನಿರ್ಗುಣವಾದ ಮಾಡುವವರು ಉಪಯೋಗಿಸುವ ವಾದ ಸರಣಿ. 'ಜ್ಞಾನವೇ ಬಂಧ ನಿವೃತ್ತಿಗೆ ಉಪಾಯ' ಎಂದಾಗ 'ಜ್ಞಾನ ನಿವರ್ತ್ಯತ್ವ' ಎಂಬ ಮಿಥ್ಯಾತ್ವ ಜಗತ್ತು, ಇತ್ಯಾದಿಗಳು ತಾನಾಗೇ ಸಿದ್ಧಿಸುವುದು ಎನ್ನುತ್ತಾರೆ ಅವರು. ಆದರೆ ಜ್ಞಾನವು ಉಪನಿಷತ್ ಪ್ರತಿಪಾದ್ಯವಲ್ಲ, ಭಕ್ತಿಯಿಂದಲೇ ಸರ್ವವೂ ಸಾಧ್ಯ ಉಪನಿಷತ್ ಸಮ್ಮತ - ಇದು ಲಘುಪೂರ್ವ ಪಕ್ಷ, ಲಘುಸಿದ್ಧಾಂತ ಭಾಗ.

ಇದೇ ರೀತಿಯಲ್ಲಿ ಉಪೇಯವಾದ ಬ್ರಹ್ಮನಿರ್ವಿಶೇಷವಲ್ಲ, ಸವಿಶೇಷವೇ ಎಂದು ಪ್ರತಿಪಾದಿಸುವು ಮಹಾಪೂರ್ವ ಪಕ್ಷ, ಮಹಾ ಸಿದ್ಧಾಂತದ ಭಾಗ.

ಇವೆರಡೂ ವಿಷಯಗಳು ಸಿದ್ಧವಾಗದಿದ್ದರೆ, ಮುಂದಿನ ವ್ಯಾಖ್ಯಾನಗಳು ನಿಲ್ಲುವುದಿಲ್ಲ. ಇದರಿಂದಲೇ ಆಚಾರ್ಯ ರಾಮಾನುಜರು ಜಿಜ್ಞಾಸಾಧಿಕರಣವನ್ನು ಅಷ್ಟೊಂದು ವಿಸ್ತಾರ ಮಾಡಬೇಕಾದುದರ ಅಗತ್ಯವಿತ್ತು.

ಈ ಕಾರಣದಿಂದ ಅಂದಿನ ಪರಿಸ್ಥಿತಿ ಹಾಗೂ ಧಾರ್ಮಿಕ ಸ್ಥಿತಿ - ಗತಿಗಳು ಅರ್ಥವಾದರೆ, ಈ ಪ್ರಕರಣದ ಮಹತ್ವ ಅರ್ಥವಾಗುವುದು.

ಈ ರೀತಿಯಲ್ಲಿ ಆಚಾರ್ಯ ರಾಮಾನುಜರು ಪರಮಾತ್ಮನ, ಶ್ರೀಮನ್ನಾರಾಯಣನ ಸರ್ವಸ್ವತ್ವವನ್ನು ಪ್ರತಿಪಾದಿಸಿದರು. ಈ ಕಾರಣದಿಂದಲೇ--

ಕುದೃಷ್ಟಿ ಕುಹನಾಮುಖೇ
ನಿಪತತಃ ಪರಬ್ರಹ್ಮಣಃ
ಕರಗ್ರಹ ವಿಚಕ್ಷಣೋ ಜಯಃ
ಲಕ್ಷ್ಮಣೋಽಯಂ ಮುನಿಃ

ಎಂಬ ಸೂಕ್ತಿ ಹುಟ್ಟಿಕೊಂಡಿತು.

ಶ್ರೀಮನ್ನಾರಾಯಣನ ಸವಿಶೇಷವಾದವನ್ನು ಸ್ಥಾಪಿಸುವುದರಿಂದಲೇ ನಮ್ಮ ವೈದಿಕ ಸಂಸ್ಕೃತಿ ಉಳಿಯುವುದು. ಆದುದರಿಂದ ಇದನ್ನು ತಿಳಿದುಕೊಳ್ಳಬೇಕಾದುದು ಅವಶ್ಯಕ - ಎಂಬ ದೃಷ್ಟಿಕೋನವನ್ನು ಆಚಾರ್ಯ ರಾಮಾನುಜರು ರೂಪಿಸಿದರು. ಇದಕ್ಕಾಗಿ 'ಶ್ರೀ ಭಾಷ್ಯ'ದ ಅಧ್ಯಯನ ಅತ್ಯಗತ್ಯ ಎಂಬ ವಿಚಾರವನ್ನು ಅವರು ಒತ್ತಿ ಹೇಳಿದರು. ಈ ದೃಷ್ಟಿಯಿಂದ ಪ್ರತಿಯೊಬ್ಬ ಭಾರತೀಯನೂ 'ಶ್ರೀ ಭಾಷ್ಯ'ವನ್ನು ಅಧ್ಯಯನ ಮಾಡುವುದು ಅತ್ಯಗತ್ಯವಾಗಿದೆ.

(ವಿವಿಧ ಮೂಲಗಳಿಂದ ಸಂಗ್ರಹ)



# ಶಂಕರ ಜೀವನ-ಸಾಧನೆ

---ಎಚ್. ವಿ. ನರಸಿಂಹಮೂರ್ತಿ.

ಆತ್ಮಜ್ಞಾನದ ಹಿಮಗಿರಿ, ವೈರಾಗ್ಯದ ಪಾರಾವಾರ, ಸನ್ಯಾಸದ ತುಂಗಶೃಂಗ ಹಾಗೂ ಬ್ರಹ್ಮಾನಂದದ ಓಂಕಾರ ಪದ್ಮಭೃಂಗರಾದ ಆಚಾರ್ಯ ಶಂಕರರು ಮಂತ್ರದ್ರಷ್ಟಾರರಾದ ವೈದಿಕ ಋಷಿಗಳು, ಮಹಾಕಾವ್ಯಕಾರರಾದ ವಾಲ್ಮೀಕಿ ಮತ್ತು ವ್ಯಾಸರು, ಔಪನಿಷದ ಹಾಗೂ ದಾರ್ಶನಿಕ ರಹಸ್ಯವೇತ್ತರಾದ ಸ್ಮೃತಿಕಾರರು - ಇವರೆಲ್ಲರ ಸಮನ್ವಿತ ಮೂರ್ತಿ, ಮಿಲನತೀರ್ಥ. ಅವರು ಬರಿಯ ಒಣವೇದಾಂತಿಗಳಲ್ಲ; ಶುಷ್ಕದಾರ್ಶನಿಕರಲ್ಲ; ರಸಸಿದ್ಧ ಕವೀಶ್ವರರು; ಕನಸುಗಾರರು. ಅವರು ವೈದಿಕ ಧರ್ಮ ಹಾಗೂ ಉಪನಿಷತ್ತಿನ ಆತ್ಮದರ್ಶನವನ್ನು ಪುನರುತ್ಥಾನಗೊಳಿಸಿದ ದಾರ್ಶನಿಕ ಸಾರ್ವಭೌಮರು. ಸಂಚಾರ ಸಾಧನಗಳ ಅಭಾವದ ಆ ಕಾಲದಲ್ಲಿ ಭಾರತದಾದ್ಯಂತ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿ ಅಖಂಡಭಾರತದ ಕಲ್ಪನೆಯನ್ನು ಕಣ್ಣಮುಂದೆ ನಿಲ್ಲಿಸಿದ ರಾಷ್ಟ್ರ ನಿರ್ಮಾಪಕರು. ಪ್ರಯಾಗ, ಹರಿದ್ವಾರ ಮತ್ತು ನಾಸಿಕ ಮೊದಲಾದ ಕಡೆಗಳಲ್ಲಿ ಕುಂಭಮೇಳ ನಡೆಸುವ ಪದ್ಧತಿಯನ್ನು ಜಾರಿಗೆ ತಂದು ಭಾರತದ ಭಾವೈಕ್ಯದ ಮಂತ್ರದ್ರಷ್ಟಾರರಾದರು. ತಮ್ಮ ಕಾಲದಲ್ಲಿ ಪ್ರಚಲಿತವಿದ್ದು ಪ್ರಬಲವಾಗುತ್ತಿದ್ದ ಶೈವ, ಶಾಕ್ತ, ವೈಷ್ಣವ, ಸೌರ, ಗಾಣಪತ್ಯ ಮತ್ತು ಕೌಮಾರವೆಂಬ ಮತಗಳಿಗೆ ಜೀವದಾನ ಮಾಡಿ ಷಣ್ಮತಸ್ಥಾಪನಾಚಾರ್ಯರೆನ್ನಿಸಿಕೊಂಡರು. ಆಗ ಪ್ರಚಲಿತವಿದ್ದ ವಿಭಿನ್ನ ವೈಖರಿಯ ಸನ್ಯಾಸಿಗಳನ್ನು ಸಂಘಟಿಸಿ 'ದಶನಾಮಿ ಸನ್ಯಾಸಿ'ಗಳೆಂದು ಕರೆದು, ಅವರನ್ನು ಸಮಾಜೋನ್ಮುಖಗೊಳಿಸಿ ಹಿಂದೂಧರ್ಮಕ್ಕೆ ಕಾಯಕಲ್ಪ ನೀಡಿದ ಧರ್ಮ ಧನ್ವಂತರಿ, ಶಂಕರರು.

## ಜನನ ಮತ್ತು ಬಾಲ್ಯ :

ಶಂಕರರ ಬಂದುಕೇ ಒಂದು ಪವಾಡ. ತಾವು ಬದುಕಿದ್ದ ಮೂವತ್ತೆರಡು ವರ್ಷಗಳ ಅವಧಿಯಲ್ಲಿ ಅವರು ನಡೆದಾಡುವ ದೀಪವಾಗಿ ಹೋದಲ್ಲೆಲ್ಲ ಬೆಳಕಿನ ಮಳೆಯನ್ನು ಕರೆದರು; ಬೆಳಕಿನ ಬೆಳೆಯನ್ನು ಬೆಳೆದರು. ಸಹಜವಾಗಿಯೇ ಇಂಥವರ ಬದುಕು, ಸಾಧನೆ - ಶೋಧನೆಗಳು ಪವಾಡಗಳ ಪೊದೆಯಲ್ಲಿ, ಇತಿಶ್ರುತಿಗಳ, ಕಿಂವದಂತಿಗಳ ಕಂತೆಯಲ್ಲಿ, ದಂತಕಥೆಗಳ ಸಂತೆಯಲ್ಲಿ ಮುಸುಕಿ ಹೋಗಿದೆ. ಆಚಾರ್ಯ ಶಂಕರರ ಪ್ರಮುಖ ಶಿಷ್ಯರಾದ ಪದ್ಮಪಾದರು 'ವಿಜಯಡಿಂಡಿಮ' ಎಂಬ ತಮ್ಮ ಗ್ರಂಥದಲ್ಲಿ ಶಂಕರರ ಜೀವನ ಚರಿತ್ರೆ ಬರೆದಿದ್ದರಂತೆ. ಆದರೆ ಅದು ಈಗ ಅನುಪಲಬ್ಧ. ಅವರ ಜೀವನ ಚರಿತ್ರೆಯ ಬಹುಭಾಗ ಆನಂದಗಿರಿಯ 'ಶಂಕರದಿಗ್ವಿಜಯ' ಹಾಗೂ 'ಲಘುಶಂಕರವಿಜಯ', ತಿರುಮಲದೀಕ್ಷಿತರ 'ಶಂಕರಾಭ್ಯುದಯ' ಮತ್ತು ಪುರುಷೋತ್ತಮಭಾರತಿಯ 'ಶಂಕರವಿಜಯ'ದಲ್ಲಿ ದೊರೆಯುತ್ತದೆ.

ಈ ಗ್ರಂಥಗಳ ಪ್ರಕಾರ ಶಂಕರರು ಕೇರಳದ ಪೂರ್ಣಾನದೀತೀರದ ಕಾಲಟಿಯಲ್ಲಿ ಕ್ರಿ.ಶ. 788 ರ ಸರಿಸುಮಾರಿನಲ್ಲಿ ಆರ್ಯಾಂಬಾ ಶಿವಗುರು ಎಂಬ ನಂಬೂದರಿ ಬ್ರಾಹ್ಮಣ ದಂಪತಿಗಳ ಮಗನಾಗಿ ವೈಶಾಖ ಶುದ್ಧ ಪಂಚಮಿಯಂದು ಜನಿಸಿದರು. ಬೆಳೆಯುವ ಪೈರು ಮೊಳಕೆಯಲ್ಲೇ ಕಾಣುವಂತೆ ಬಾಲ್ಯದಲ್ಲೇ ಅವರು ತಮ್ಮ ಅಲೌಕಿಕ ಪ್ರತಿಭೆ



## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರ ವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾ. ಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ ಕಲ್ಪಿಸುವುದು. ಬಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಯನ್ನು ತೋರತೊಡಗಿದರು. ಮೂರು ವರ್ಷಕ್ಕೆ ಮಾತೃಭಾಷೆಯನ್ನು ಕಲಿತು, ಇತಿಹಾಸ - ಪುರಾಣಗಳನ್ನು ಬಹುದೇಗನೆ ಕಂಠಗತಗೊಳಿಸಿಕೊಂಡರು. ಮೂರು ವರ್ಷದ ಮಗುವಾಗಿದ್ದಾಗಲೇ ಅವರಿಗೆ ಪಿತೃವಿಯೋಗ.

ಐದು ವರ್ಷಕ್ಕೆ ಉಪನಯನ. ಪಾಠಶಾಲೆ ಸೇರಿ ಏಳು ವರ್ಷ ತುಂಬುವ ಹೊತ್ತಿಗೆ ಸಮಸ್ತಶಾಸ್ತ್ರಗಳಲ್ಲಿ ಪಾರಂಗತರಾದರು. ವೇದ - ವೇದಾಂತ ಹಾಗೂ ವೇದಾಂಗಗಳನ್ನೆಲ್ಲ ಅವರು ಕರತಲಾಮಲಕವನ್ನಾಗಿ ಮಾಡಿಕೊಂಡರು. 'ಆಮಲಕ' ಎಂದ ಕೂಡಲೆ ಈ ಘಟ್ಟದಲ್ಲಿ ನಡೆದ ಒಂದು ಘಟನೆಯ ನೆನಪಾಗುತ್ತದೆ. ಶಂಕರರು ಇನ್ನೂ ವಿದ್ಯಾರ್ಥಿಯಾಗಿದ್ದಾಗ ಒಬ್ಬ ಬಡಬ್ರಾಹ್ಮಣ ಬಂದು ಅವರ ಕೈಯಲ್ಲಿ ಒಂದು 'ಆಮಲಕ' (ನೆಲ್ಲಿಕಾಯಿ) ವನ್ನಿಟ್ಟು ತನ್ನ ದಾರಿದ್ರ್ಯದ ಗೋಳನ್ನು ತೋಡಿಕೊಂಡ. ಆತನ ಗೋಳನ್ನು ಕೇಳಿ ಬಾಲಕ ಶಂಕರ ಕರಗಿಹೋದ. ಜಗನ್ಮಾತೆ ಲಕ್ಷ್ಮಿಯನ್ನು ಭಾವೋತ್ಕಟತೆಯಿಂದ ಸ್ತುತಿಸಿದ. ಅದರ ಫಲವಾಗಿ ಆ ಬ್ರಾಹ್ಮಣನ ಮನೆಯಲ್ಲಿ ಚಿನ್ನದ ನೆಲ್ಲಿಯ ಮಳೆ ಸುರಿಯಿತಂತೆ. ಶಂಕರರ ಈ ಸ್ತೋತ್ರ ಕನಕಧಾರಾ ಸ್ತೋತ್ರವೆಂದು ವಿಖ್ಯಾತವಾಗಿದೆ.

### ಸನ್ಯಾಸಸ್ವೀಕಾರ :

ಅಧ್ಯಯನ ಮುಗಿಸಿ ಶಂಕರರು ಮನೆಗೆ ಮರಳಿದರು. ಅವರ ಮನಸ್ಸಿನಲ್ಲಿ ಆಗ ವೈರಾಗ್ಯ ಹಾಗೂ ಸನ್ಯಾಸದ ಗುಂಗೇ ಗುಂಗು! ತುಟಿಯ ತುದಿಯಲ್ಲಿ ಆತ್ಮಜ್ಞಾನದ ಪಿಪಾಸೆ! ಮನೆಗೆ ಮರಳಿದ ಕೂಡಲೆ ಅವರು ಸನ್ಯಾಸ ತೆಗೆದುಕೊಳ್ಳಲು ಸಂಕಲ್ಪಿಸಿದರು. ಏಕಮಾತ್ರಪುತ್ರನಿಗೆ ಮದುವೆ ಮಾಡಿ ಕುಲದೀಪಕನನ್ನು ಕಾಣುವ ಕನಸಿನಲ್ಲಿದ್ದ ತಾಯಿಗೆ ಇದರಿಂದ ವಜ್ರಾಘಾತ! ಬಿರುಗಾಳಿಯನ್ನು ಕಿರುಬೆರಳಿನಿಂದ ತಡೆಯಲು ಯತ್ನ! ಹೀಗಾಗಿ ತಾಯಿ ಬಿಸಿತುಪ್ಪ ಕುಡಿದಂತೆ ಇದ್ದಳು! ಒಮ್ಮೆ ಶಂಕರರು ಪೂರ್ಣಾನದಿಯಲ್ಲಿ ಮಿಾಯುತ್ತಿದ್ದಾಗ ಒಂದು ಮೊಸಳೆ ಅವರ ಕಾಲು ಹಿಡಿಯಿತು. ಇನ್ನು ತಾನು ಬದುಕುವುದಿಲ್ಲವೆಂದೂ, ಸನ್ಯಾಸಕ್ಕೆ ಅನುಮತಿಸಿದರೆ ನೆಮ್ಮದಿಯಿಂದ ಪ್ರಾಣ ಬಿಡುವುದಾಗಿಯೂ ತಾಯಿಯಲ್ಲಿ ಅಂಗಲಾಚಿದರು. ಕೊನೆಗೆ ತಾಯಿ ವಿಧಿಯಿಲ್ಲದೆ 'ಅಸ್ತು' ಎನ್ನಬೇಕಾಯಿತು. ಅದೇನು ಕಾರಣದಿಂದಲೋ ಮೊಸಳೆಯೂ ಓಡಿಹೋಯಿತು. ಅಂತೂ ಶಂಕರರ ಇಷ್ಟಾರ್ಥ ನೆರವೇರಿತು. 'ಎಂಟು ವರ್ಷಕ್ಕೆ ನನ್ನ ಮಗ ದಂಟು ಎಂದ' - ಎಂಬ ಅನುಭವವುಳ್ಳ ತಂದೆ - ತಾಯಂದಿರೂ ಇದ್ದಾರೆ. ಆದರೆ ಇಲ್ಲಿ ಎಂಟು ವರ್ಷಕ್ಕೇ ಎಲ್ಲ ನಂಟನ್ನೂ ಹರಿದು,

ವೈರಾಗ್ಯದ ಮರಳುಗಾಡಿನಲ್ಲಿ ಒಂಟಿಯಾಗಿ ಶಂಕರ ಹೊರಟ. ಓಂಕಾರನಾಥ ಕ್ಷೇತ್ರದ ನರ್ಮದಾತ ಟದಲ್ಲಿ ಶಂಕರರು ಗೋವಿಂದಭಗವತ್ಪಾದರಿಂದ ಸನ್ಯಾಸ ಸ್ವೀಕರಿಸಿದರು. ಕೆಲವೇ ದಿನಗಳಲ್ಲಿ ಅವರು ಅಧ್ಯಾತ್ಮದ ಸಿರಿಗಿರಿಯನ್ನೇರಿದರು. ಬ್ರಹ್ಮಸೂತ್ರದ ಮೇಲೆ ಭಾಷ್ಯ ಬರೆಯುವಂತೆ ಪ್ರೇರಣೆ ನೀಡಿ ಗುರು ಗೋವಿಂದರು ಕಾಶಿಗೆ ಹೋಗುವಂತೆ ಅವ ರಿಗೆ ಅಣತಿ ನೀಡಿದರು. ಕಾಶಿಯಲ್ಲಿ ಪದ್ಮಪಾ ದರು ಅವರ ಶಿಷ್ಯರಾದರು. ಅಲ್ಲಿ ಅವರು ತಮ್ಮ ಶಿಷ್ಯರಿಗೆ ಪಾಠ ಹೇಳುವುದರ ಜತೆಗೆ ಗ್ರಂಥ ರಚನೆ ಯನ್ನು ಮಾಡುತ್ತಿದ್ದರು. ಅವರು ಅದ್ವೈತಮತವನ್ನು ಪ್ರವರ್ತಿಸಿದರು. ಶಾಸ್ತ್ರಾರ್ಥದಲ್ಲಿ ಭಾರತಾದ್ಯಂತ ಎಲ್ಲ ವಿದ್ವಾಂಸರನ್ನೂ ಸೋಲಿಸಿ ಹಿಮಾಲಯವೂ ಮಾರ್ದನಿಗೊಳ್ಳುವಂತೆ ಅದ್ವೈತಮತದ ಚಂಡಡಿಂ ಡಿಮವನ್ನು ಬಾರಿಸಿದರು.

## ಶಂಕರ ದಿಗ್ವಿಜಯ :

ಕಾಶಿಯಲ್ಲಿದ್ದಾಗ ಒಮ್ಮೆ ಒಬ್ಬ ಚಾಂಡಾಲ ಅವರ ಹಾದಿಗೆ ಅಡ್ಡಲಾಗಿ ಬಂದ. ಅವನ ಬಳಿ ನಾಲ್ಕು ನಾಯಿಗಳು ! ಶಂಕರರು ಅವನನ್ನು ಬದಿಗೆ ಸರಿ ಯುವಂತೆ ಹೇಳಿದರು. ಆಗ ಚಾಂಡಾಲ ಹೇಳಿದ : 'ಜೀವಕ್ಕೂ ಪರಬ್ರಹ್ಮನಿಗೂ ಭೇದವಿಲ್ಲವೆನ್ನುವ ನೀವು ಸ್ಪರ್ಶಾಸ್ಪರ್ಶದ ಭೇದವೆಣಿಸುವುದು ನಿಜಕ್ಕೂ ಸೋಜಿಗ' ವಾಸ್ತವವಾಗಿ ಆಗ ಶಂಕರರ ಕಣ್ಣು ತೆರೆ ಯಿತು. ಕೂಡಲೆ ಅವರು ಸಣ್ಣ - ಪುಟ್ಟ ಎಲ್ಲ ಜೀವಗಳಲ್ಲೂ, ಚರಾಚರದಲ್ಲೂ ಆತ್ಮಸ್ವರೂಪದ ಅಭಿವ್ಯಕ್ತಿಯ ಜ್ಞಾನವುಳ್ಳ ಚಾಂಡಾಲನೂ ನನಗೆ ಗುರು. 'ಚಾಂಡಾಲೋಽಸ್ತು ಸಚ ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ' - ಎಂದು ಹೇಳಿ 'ಮನೀಷಾಪಂಚಕ'ವೆಂಬ ಗೀತವನ್ನು ಹಾಡಿದರು. ಅನಂತರ ಅವರು ದಿಗ್ವಿಜಯವನ್ನು ಆರಂಭಿಸಿ ದರು. ಅನಂತಶಯನ, ಅಯೋಧ್ಯೆ, ಉಜ್ಜಯಿನಿ, ಕಂಚಿ, ಚಿದಂಬರ, ಬದರಿ, ಪ್ರಯಾಗ - ಮೊದಲಾದ ಮಹಾನಗರಗಳಲ್ಲಿ ಅವರು ಆತ್ಮಜ್ಞಾನದ ಪ್ರಚಾರ ಮಾಡಿದರು. ಪ್ರಯಾಗದಲ್ಲಿ ಕುಮಾರಿಲಭಟ್ಟರು ತುಷಾಗ್ನಿಗೆ ತಮ್ಮ ದೇಹವನ್ನು ಸಮರ್ಪಿಸಿಕೊಂಡಿ ದ್ದರು. ಶಂಕರರು ಅವರ ಬಳಿಗೆ ಹೋಗಿ ಶಾಸ್ತ್ರಾರ್ಥ ವಿಚಾರ ವಿನಿಮಯ ಮಾಡಿದರು. ಅವರ ಆದೇಶ ದಂತೆ ಮಂಡನಮಿಶ್ರರೊಂದಿಗೆ ಶಾಸ್ತ್ರಾರ್ಥ ಚಿಂತನ ನಡೆಸಲು ಮಾಹಿಷ್ಮತಿಗೆ ಹೋದರು. ಆತನ ಪತ್ನಿ ಭಾರತಿ ಮಹಾ ವಿದುಷಿ. ಆಕೆ ತನ್ನನ್ನು ಸೋಲಿಸು ವಂತೆ ಶಂಕರರಿಗೆ ಆಹ್ವಾನ ನೀಡಿದಳು. ಆಕೆ ಕೇಳಿದ ಕಾಮಶಾಸ್ತ್ರದ ಪ್ರಶ್ನೆಗಳಿಗೆ ಬಾಲಬ್ರಹ್ಮಚಾರಿ ಶಂಕರ ಏನು ಉತ್ತರ ಹೇಳಬಲ್ಲ! ಕೊನೆಗೆ ಅವರು ಅಮ ರುಕ ಎಂಬ ರಾಜನ ಮೃತದೇಹದಲ್ಲಿ ಪರಕಾಯ ಪ್ರವೇಶಮಾಡಿ, ಕಾಮಶಾಸ್ತ್ರ ಮನನ ಮಾಡಿ, ಉತ್ತರ ಹೇಳಿ ಭಾರತಿಯ ಬಾಯಿ ಮುಚ್ಚಿಸಿದರು. ಮಂಡನ ಮಿಶ್ರರು ಶಂಕರರ ಶಿಷ್ಯರಾಗಿ ಸನ್ಯಾಸ ಸ್ವೀಕರಿಸಿ ಸುರೇಶ್ವರಾಚಾರ್ಯರಾದರು. ಭಾರತೀಯ ಧರ್ಮ ಶಾಸ್ತ್ರದ ಹಿಮಾಲಯದಿಂದ ಶಂಕರರ ಜ್ಞಾನಗಂಗೆ ಹೊಮ್ಮಿ ಸುತ್ತ - ಮುತ್ತ ಎತ್ತೆತ್ತಲೂ ಹಬ್ಬಿ ದೈವಭ ಕ್ತಿಯ ಪುಣ್ಯದ ಕೃಷಿಯನ್ನು ಮಾಡಿತು.

## ಅದ್ವೈತ ಸಿದ್ಧಾಂತ :

ಆಚಾರ್ಯ ಶಂಕರರು ಬೋಧಿಸಿದ ಅದ್ವೈತಸಿ ದ್ಧಾಂತ, ಏಕತೆಯ ಸಿದ್ಧಾಂತ. ಇದನ್ನು ಸಂಗ್ರಹವಾಗಿ 'ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಽಪರಃ' - ಎಂದು ಹೇಳುವುದುಂಟು. ಅಂದರೆ ಬ್ರಹ್ಮವು ಸತ್ಯ. ಎಲ್ಲೆಲ್ಲಿಯೂ ಬ್ರಹ್ಮವಸ್ತು ವ್ಯಾಪಿಸಿರುತ್ತದೆ. ಅದನ್ನು ಬಿಟ್ಟು ಬೇರೆಯಾಗಿ ಕಾಣುವುದೆಲ್ಲ ಮಾಯೆ. ಈ ಮಾಯೆಯು ನಮ್ಮ ಕಣ್ಣಿಗೆ ಬಣ್ಣದ ಕನ್ನಡಕದಂತೆ ವಿವಿಧ ರೂಪಗಳನ್ನು ತೋರಿಸುತ್ತದೆ. ಅವುಗಳಿಗೆ ನಾವು ಬೇರೆ - ಬೇರೆ ಹೆಸರುಗಳನ್ನು ರೂಢಿ ಮಾಡಿ ಕೊಂಡಿದ್ದೇವೆ. ಅವುಗಳ ಹೆಸರನ್ನು ಪೂರ್ತಿಯಾಗಿ ಅಳಿಸಿಹಾಕಿದರೆ ಉಳಿಯುವುದು ಒಂದೇ ಚೈತನ್ಯ ಅದು ಬ್ರಹ್ಮವೆಂಬುದು. ಬ್ರಹ್ಮವು ಎಲ್ಲ ನಾಮ - ರೂಪಗಳ ಒಳಗಡೆಗೂ ಹರಿದಿರುತ್ತದೆ. ಅದನ್ನೇ ಮಹಾವಾಕ್ಯಗಳಲ್ಲಿ 'ಅಹಂ ಬ್ರಹ್ಮಾಸ್ಮಿ; ತತ್ತ್ವಮಸಿ; ಸರ್ವಂ ಖಲ್ವಿದಂ ಬ್ರಹ್ಮ' - ಎಂದು ಹೇಳುತ್ತಾರೆ. ಆ ಒಂದು ವಸ್ತುವೇ ನಾನು, ನೀನು, ಅವನು - ಮೊದಲಾದ ಹೆಸರುಗಳಿಂದ ವ್ಯವಹಾರದಲ್ಲಿ ಕರೆ ಯುವ ಅಂತಶ್ಚೈತನ್ಯ. 'ಏಕಂ ಸದ್ವಿಪ್ರಾ ಬಹುಧಾ ವದಂತಿ' - ಎಂಬಂತೆ ಪರಮಾರ್ಥ ಸತ್ಯ ಒಂದೇ. ಅದನ್ನು ಜನರು ಬೇರೆ - ಬೇರೆ ಹೆಸರಿನಿಂದ ಕರೆ ಯುತ್ತಾರೆ. ಬ್ರಹ್ಮ ಒಂದೇ ಸತ್ಯ; ಜಗತ್ತು ಮಿಥ್ಯಾಭೂ ತವಾದುದು; ಜೀವವು ಬ್ರಹ್ಮವಲ್ಲದೆ ಬೇರೆಯಲ್ಲ - ಇದೇ ಸಮನ್ವಯಾತ್ಮಕವಾದ, ಏಕತೆಯನ್ನು ಪ್ರತಿ ಪಾದಿಸುವ ಅದ್ವೈತ ಸಿದ್ಧಾಂತದ ಸಾರ. ಈ ಅದ್ವೈ ತದಿಂದ ನಮ್ಮ ಪ್ರತಿಯೊಂದು ವಿಚಾರ, ಭಾವನೆ, ಚಲನ - ವಲನಗಳು ಸಹಜವಾಗಿಯೇ ಉದಾತ್ತ ಗೊಳ್ಳುತ್ತವೆ; ಅವುಗಳಲ್ಲಿ ವಿಶ್ವಪ್ರೇಮ ಉಕ್ಕೇರು ತ್ತದೆ. ಲೋಕ ಕಲ್ಯಾಣದ ಪ್ರೇರಣೆ ಪುಟಿದೇಳುತ್ತದೆ. ಸ್ವಾರ್ಥದ ಸ್ಥಳದಲ್ಲಿ ತ್ಯಾಗ, ಶೋಷಣೆಯ ಸ್ಥಳದಲ್ಲಿ ಸೇವೆ, ಘರ್ಷಣೆಯ ಸ್ಥಾನದಲ್ಲಿ ಸಹಕಾರ, ಭೇದವಿ ದ್ದಲ್ಲಿ ಏಕತೆ ಮೂಡಿ ಬರುತ್ತದೆ. ಈ ಅದ್ವೈತ ಸಿದ್ಧಾಂತ ಭಾರತೀಯ ದಾರ್ಶನಿಕ ಪರಂಪರೆಗೆ ಭಗವತ್ಪಾದ ಶಂಕರರು ನೀಡಿದ ಬಹುದೊಡ್ಡ ಕೊಡುಗೆ.

## ಆಚಾರ್ಯರ ಉಪದೇಶ :

ಆಚಾರ್ಯರ ಉಪದೇಶ ಬಹಳ ಸರಳ. ಅವರು ರಚಿಸಿದ ಸ್ತೋತ್ರಗಳಲ್ಲೆಲ್ಲ ಈ ಉಪದೇಶ ಹಾಸು ಹೊಕ್ಕಾಗಿದೆ. 'ಮೋಹಮುದ್ಗರ' ಎಂಬ ಹೆಸರಿನ ಭಜಗೋವಿಂದಂ ಸ್ತೋತ್ರದಲ್ಲಿ 'ಗೋವಿಂದಂ ಭಜ ಮೂಢಮತೇ' ಎಂದು ದೇವರಲ್ಲಿ ಭಕ್ತಿ ಇಡಲು ಮಾತ್ರ ಹೇಳಿಲ್ಲ; 'ನೇಯಂ ಸಜ್ಜನ ಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಂ' - ಎಂದು ಸಜ್ಜನರ ಸಹವಾಸ ಮಾಡಿ; ದೀನ - ದಲಿತರಿಗೆ ಹಣನೀಡಿ ಸಹಾಯಮಾಡಿ' - ಎಂದು ಹೇಳು ತ್ತಾರೆ. ಮತ್ತೊಂದು ಶ್ಲೋಕದಲ್ಲಿ 'ಅಂಗಂ ಗಲಿತಂ ಪಲಿತಂ ಮುಂಡಂ' - ಎಂದು ಒಬ್ಬ ವಯೋವೃ ದ್ಧನ ಸುಂದರ ಶಬ್ದಚಿತ್ರ ನೀಡಿ, ಆಶೆಯನ್ನು ಬಿಡಿ - ಎಂದು ಸೂಚ್ಯವಾಗಿ ತಿಳಿಸುತ್ತಾರೆ. 'ಭಗವದ್ಗೀತಾ ಕಿಂಚಿದಧೀತ......' ಎಂದು ಗೀತೆಯಂತಹ ಸದ್ಗ್ರಂಥ ಓದಿ; ಗಂಗೆಯಂತಹ ತೀರ್ಥ ಸೇವನೆ ಮಾಡಿ; ಭಗ ವಂತನ ಕಡೆಗೆ ಮನಸ್ಸು ಕೊಡಿ' - ಎಂದು ಧಾರ್ಮಿಕ ಜೀವನದ ಕರೆ ಕೊಡುತ್ತಾರೆ. 'ಸಾಧನ ಪಂಚಕಂ' - ಎಂಬ ಮತ್ತೊಂದು ಸ್ತೋತ್ರದಲ್ಲಿ 'ವೇದೋ ನಿತ್ಯ ಮಧೀಯತಾಂ......' ಎಂದೆಲ್ಲ ಹೇಳಿ 'ಸ್ವಾದ್ವನ್ನಂ ನ ತುಯಾಚ್ಯತಾಂ ವಿಧಿವಶಾತ್ ಪ್ರಾಪ್ತೇನ ಸಂತು ಷ್ಯತಾಂ' - ಎಂದು ಭೋಗ ಜೀವನ ಬೇಡ; ದೈವ ದತ್ತವಾಗಿ ನಿಮಗೇನು ದೊರಕಿದೆಯೋ ಅಷ್ಟರಲ್ಲೇ ಸಂತೃಪ್ತರಾಗಿ - ಎಂದು ಬೋಧಿಸುತ್ತಾರೆ. 'ಕೌಪೀನ ಪಂಚಕಂ' ಎಂಬ ಮತ್ತೊಂದು ಸ್ತೋತ್ರದಲ್ಲಿ 'ಕೌಪೀ ನವಂತಃ ಖಲು ಭಾಗ್ಯವಂತಃ' ಎಂದು ಸರಳ ಜೀವ ನದ ಕಡೆಗೆ ಗಮನ ಕೊಡಲು ಕರೆ ನೀಡುತ್ತಾರೆ. 'ವಿವೇಕ ಚೂಡಾಮಣಿ' ಯಲ್ಲಿ 'ಜಂತೂನಾಂ ನರ ಜನ್ಮದುರ್ಲಭಮ್' - ಎಂದು ಮನುಷ್ಯ ಜನ್ಮದೊ ಡ್ಡದು; ಅದನ್ನು ಹಾಳು ಮಾಡಿಕೊಳ್ಳಬೇಡಿ - ಎಂದು ಬೋಧಿಸುತ್ತಾರೆ. ಹೀಗೆ ಆಚಾರ್ಯ ಶಂಕರರ ಉಪದೇಶ ಬಹಳ ಸರಳ; ನೇರ. ಅಂದಿಗೆಷ್ಟೋ ಇಂದಿಗೂ ಅಷ್ಟೇ ಉಪಯುಕ್ತ.

ತತ್ತ್ವತಃ ಜೀವಿಗಳೆಲ್ಲರೂ ಈಶ್ವರ ನೊಡನೆ ಅಭಿನ್ನ; ಆದ್ದರಿಂದ ಎಲ್ಲರೂ ಸಮಾನರು - ಎಂಬ ಅವರ ಆಧ್ಯಾತ್ಮಿಕ ಸಾಮ್ಯವಾದಕ್ಕೆ ಇಂದು ಎಂದಿ ಗಿಂತ ಹೆಚ್ಚಿನ ಪ್ರಾಸಂಗಿಕತೆಯಿದೆ. ಬುದ್ಧಿ - ಭಾವ ಗಳ ವಿದ್ಯುದಾಲಿಂಗನ ಅವರ ವ್ಯಕ್ತಿತ್ವದ ಮೋಡಿ. ಈ ಸಮಪಾಕ ಇಲ್ಲದಿರುವುದರಿಂದಲೇ ನಮ್ಮ ಇಂದಿನ ಜೀವನ ರಾಡಿ!



# ಅನ್ನಮಾಚಾರ್ಯ ಕಾವ್ಯಸುಧೆ



ಅನ್ನಮಾಚಾರ್ಯ ಶ್ರೀ ವೆಂಕಟೇಶ್ವರನ ಅತಿ ಹಿರಿಯ ಭಕ್ತ ಆದ್ದರಿಂದ ಅವನಿಂದ ಐದು ಶತಮಾನ ದೂರದಲ್ಲಿರುವ ನಮಗೇನು ಲಾಭ ಎಂದರೆ ಆತನ ಸಾಹಿತ್ಯ ಅದರ ಅಧ್ಯಯನ, ಆಲಾಪನಗಳಿಂದ ಇಂದು ದೊರೆಯುವ ಸತ್ಸಂಗ; ಸದ್ವಾಸಂಗ, ಅದರಿಂದ ದೊರೆಯುವ ಚಿತ್ತಶಾಂತಿ, ಸುಮತಿ, ಸೌಹಾರ್ದತೆಗಳು ಎಂಬುದರಲ್ಲಿ ವಾದಕ್ಕೆ ಎಡೆಯಿಲ್ಲ. ಆತನ ಸಾಹಿತ್ಯ ಅಪಾರವಾದದ್ದು. ಸಂಖ್ಯಾದೃಷ್ಟಿಯಿಂದ ಮೂವತ್ತೆರಡು ಸಾವಿರ ಕೃತಿಗಳು ಎಂದು ಚೆನ್ನನ್ನ ತಿಳಿಸಿದ್ದರೂ ದೊರಕಿದ್ದು ಅದರ ಒಂದು ಭಾಗ ಮಾತ್ರವೇ, ಆದರೂ ಅದೇ ಅಪಾರ - ನಮ್ಮ ತಂಬಿಗೆಯಲ್ಲಿ ಮೊಗೆದುಕೊಂಡ ಮೇಲೂ ಮಿಗುವ ಕಡಮೆಯಾಗದ ಪ್ರಮಾಣದ ದೃಷ್ಟಿಯಿಂದ. ಇಂತಹ ಸಾಹಿತ್ಯ ಸಾಗರ ಕ್ಷಾರವೇನಲ್ಲ - ಕಣಕಣ ಬಿಂದು ಬಿಂದು ಕ್ಷೀರ. ಅದರಿಂದ ಪುಷ್ಟಿ ತುಷ್ಟಿಗಳೂ ಉಂಟು ಎಂಬುದು ಬಲ್ಲವರ, ದೆಳೆದವರ ಮತ. ಅನ್ನಮಾಚಾರ್ಯರ ಜಯಂತಿಯ ಹೊತ್ತಿನಲ್ಲಿ ಆ ಕೆಲವು ಆಣಿ ಮುತ್ತು ಕೀರ್ತನೆಗಳನ್ನು ಹೆಕ್ಕಿ ಇಲ್ಲಿ ನೀಡಲಾಗಿವೆ. ಈ ಕೀರ್ತನೆಗಳೊಂದಿಗೆ ಕನ್ನಡದ ಅರ್ಥ ದಿಕ್ಸೂಚಿಯನ್ನು ನೀಡಲಾಗಿದೆ.

* * * * * * * * * * *

ಅದೇ ವೆಂಕಟಾಚಲವೆಂದು ವಿವರಿಸುತ್ತ ಅನ್ನಮಯ್ಯ ಅಪರೂಪವಾದದ್ದೂ ಬ್ರಹ್ಮಾದಿಗಳ ನಿವಾಸವೆಂದೂ, ಮುಂದಿರುವ ಮೂಲಧನವೆಂದೂ, ಸಂಕಲ ಸಂಪತ್ತೂ ಅದೇ ಎಂದೂ ವಿವರಿಸುತ್ತಿದ್ದಾನೆ.

## 1. ಶ್ರೀರಾಗ

ಅದಿವೋ ಅಲ್ಲದಿವೋ ಹರಿವಾಸಮು
ಪದಿವೇಲ ಶೇಷುಲ ಪಡಗಲ ಮಯಮು. ಅದಿ

ಅದೆ ವೇಂಕಟಾಚಲಮಖಿಲೋನ್ನತಮು
ಅದಿವೋ ಬ್ರಹ್ಮಾದುಲಕಪುರೂಪಮು,
ಅದಿವೋ ನಿತ್ಯ ನಿವಾಸಮಖಿಲ ಮುನುಲಕು
ಅದೆ ಚೂಡು ಡದೆ ಮ್ರೊಕ್ಕುಡಾನಂದಮಯಮು. ಅದಿ

ಚೆಂಗಟ ನಲ್ಲದಿವೋ ಶೇಷಾಚಲಮು
ನಿಂಗಿ ನುನ್ನ ದೇವತಲ ನಿಜವಾಸಮು,
ಮುಂಗಿಟ ನಲ್ಲದಿವೋ ಮೂಲನುನ್ನ ಧನಮು
ಬಂಗಾರು ಶಿಖರಾಲ ಬಹು ಬ್ರಹ್ಮಮಯಮು. ಅದಿ

ಕೈವಲ್ಯಪದಮು ವೇಂ ಕಟನಗ ಮದಿವೋ
ಶ್ರೀ ವೇಂಕಟಪತಿಕಿ ಸಿರುಲೈನದಿ,
ಭಾವಿಂಪ ಸಕಲ ಸಂ ಪದರೂಪ ಮದಿವೋ
ಪಾವನಮುಲ ಕೆಲ್ಲ ಪಾವನ ಮಯಮು. ಅದಿ

ಅನ್ನಮಾಚಾರ್ಯ ಕೀರ್ತನೆಗಳಲ್ಲಿ ಸಂಪೂರ್ಣ ಸಂಸ್ಕೃತಮಯಾಗಿರುವ ಕೀರ್ತನೆಗಳಲ್ಲಿ ಇದೂ ಒಂದು. ವೇದೋದ್ಧರ ಶ್ರೀ ಪುರಂದರ ವಿಠಲ ಎಂಬ ಮುದ್ರಿಕೆಯೊಡನೆ ಕನ್ನಡಿಗರಲ್ಲಿ ಪುರಂದರ ದಾಸರ ಹೆಸರಿನಲ್ಲಿಯೂ ಈ ಕೀರ್ತನೆ ಪ್ರಸಿದ್ಧ. ತಿರುಮಲೆಯಲ್ಲಿ ಇಬ್ಬರೂ ಸೇರಿ ಸ್ವಾಮಿಯನ್ನು ಕೀರ್ತಿಸಿದಾಗ ಹೊರಬಂದ ಕವಿತಾವಲ್ಲರಿಯಿದು ಎಂಬ ಅಭಿಮತವೂ ಇದೆ.

## 2. ಪಾಡಿ

ನಾರಾಯಣ ತೇ ನಮೋ ನಮೋ
ನಾರದ ಸನ್ನುತ ನಮೋ ನಮೋ. ನಾರಾ

ಮುರಹರ ಭವಹರ ಮುಕುಂದಮಾಧವ
ಗರುಡ ಗಮನ ಪಂಕಜನಾಭ,

ಪರಮಪುರುಷ ಭವಬಂಧ ವಿಮೋಚನ
ನರಮೃಗ ಶರೀರ ನಮೋ ನಮೋ. ನಾರಾ

ಜಲಧಿಶಯನ ರವಿಚಂದ್ರ ವಿಲೋಚನ
ಜಲರುಹ ಭವನುತ ಚರಣಯುಗ,
ಬಲಿಬಂಧನ ಗೋಪವಧೂ ವಲ್ಲಭ
ನಲಿನೋದರ ತೇ ನಮೋ ನಮೋ. ನಾರಾ

ಆದಿದೇವ ಸಕಲಾಗಮ ಪೂಜಿತ
ಯಾದವಕುಲ ಮೋಹನ ರೂಪ,



ವೇದೋದ್ಧರ ಶ್ರೀವೇಂಕಟ ನಾಯಕ
ನಾದಪ್ರಿಯತೇ ನಮೋ ನಮೋ. ನಾರಾ

ಬೆಟ್ಟಗಳಲ್ಲಿ ನೆಲೆಗೊಂಡ ವೆಂಕಟೇಶ್ವರಸ್ವಾಮಿ ಕುಂಬಾರ ಕುರುವರತಿನಂಬಿಯನ್ನು, ತೊಂಡಮಾನ್ ಚಕ್ರವರ್ತಿಯನ್ನೂ ಅನಂತಾಳ್ವಾರರನ್ನೂ, ತಿರುಮಲನಂಬಿಯನ್ನೂ, ತಿರುಕಚ್ಚಿ ನಂಬಿಯನ್ನೂ ಅನುಗ್ರಹಿಸಿದವನು. ಅಂತಹವ ನಮ್ಮನ್ನೂ ಅನುಗ್ರಹಿಸುತ್ತಾನೆ ಎಂಬುದಿಲ್ಲಿ ಅಭಿಮತ.

## 3. ಸಾಮಂತಂ

ಕೊಂಡಲಲೋ ನೆಲಕೊನ್ನ ಕೋನೇಟಿರಾಯಡು ವಾಡು
ಕೊಂಡಲಂತ ವರಮುಲು ಗುಪ್ಪೆಡು ವಾಡು. ಕೊಂಡ

ಕುಮ್ಮರದಾಸುಡೈನ ಕುರವರತಿ ನಂಬಿ
ಯಿಮ್ಮನ್ನ ವರಮುಲಲೆಲ್ಲನಿಚ್ಚಿನ ವಾಡು,

ದೊಮ್ಮುಲು ಸೇಸಿನಯಟ್ಟಿ ತೊಂಡಮಾಂ ಚಕ್ಕುರವರ್ತಿ
ರಮ್ಮನ್ನ ಚೋಟಿಕಿ ವಚ್ಚಿ ನಮ್ಮಿನವಾಡು. ಕೊಂಡ

ಅಚ್ಚಪು ವೇಡುಕತೋಡ ನನಂತಾಳುವಾರಿಕಿ
ಮುಚ್ಚಿಲಿ ವೆಟ್ಟಿಕಿ ಮನ್ನು ಮೋಚಿನವಾಡು, ಕೊಂಡ

ಮಚ್ಚಿಕ ದೊಲಕ ದಿರುಮಲ ನಂಬಿತೋಡುತ
ನಿಚ್ಚ ನಿಚ್ಚ ಮಾಟಲಾಡಿ ನೊಚ್ಚಿನವಾಡು. ಕೊಂಡ

ಕಂಚಿಲೋನ ನುಂಡ ದಿರುಕಚ್ಚಿ ನಂಬಿಮಿಾದ ಗರು
ಣಿಂಚಿ ತನ ಯೆಡಕು ರಪ್ಪಿಂಚಿನ ವಾಡು,
ಯೆಂಚಿ ನೆಕ್ಕುಡೈನ ವೇಂಕಟೇಶುಡು ಮನಲಕು
ಮಂಚಿವಾಡೈ ಕರುಣ ಬಾಲಿಂಚಿನವಾಡು. ಕೊಂಡ

ಬದುಕೇ ಒಂದು ನಾಟಕ ಎನ್ನುತ್ತ ಅನ್ನಮಯ್ಯ ಬದುಕಿನ ಅಸಾರತೆಯನ್ನು ಅವಧಾರಿಸುತ್ತಿದ್ದಾನೆ. ಜನನ - ಮರಣಗಳೆಂಬ ನಿಜಗಳ ನಡುವೆ ಇರುವುದನ್ನು ನಶ್ವರವೆನ್ನುತ್ತಾನೆ ಕೈವಲ್ಯಕಾಮಿ ಅನ್ನಮಯ್ಯ.

## 4. ಮುಖಾರಿ

ನಾನಾಟಿ ಬದುಕು ನಾಟಕಮು
ಕಾನಕ ಕನ್ನದಿ ಕೈವಲ್ಯಮು. ನಾನಾ

ಪುಟ್ಟುಟಯು ನಿಜಮು ಪೋವುಟಯು ನಿಜಮು
ನಟ್ಟನಡಿಮಿ ಪನಿ ನಾಟಕಮು,
ಯೆಟ್ಟ ಯೆದುಟಗಲದೀ ಪ್ರಪಂಚಮು
ಕಟ್ಟ ಗಡಪಟಿದಿ ಕೈವಲ್ಯಮು. ನಾನಾ

ಕುಡಿಚೇ ದನ್ನಮುಕೋಕ ಚುಟ್ಟೆಡಿದಿ
ನಡುಮಂತ್ರಪು ಪನಿ ನಾಟಕಮು,
ವೊಡಿ ಗಟ್ಟುಕೊನಿನ ವುಭಯಕರ್ಮಮುಲು
ಗಡಿ ದಾಟಿನಪುಡೆ ಕೈವಲ್ಯಮು. ನಾನಾ

ತೆಗದು ಪಾಪಮು ತೀರದು ಪುಣ್ಯಮು
ನಗಿ ನಗಿ ಕಾಲಮು ನಾಟಕಮು.
ಯೆಗುವನೆ ಶ್ರೀ ವೇಂಕಟೇಶ್ವರು ಡೇಲಿಕ
ಗಗನಮು ಮಿಾದಿದಿ ಕೈವಲ್ಯಮು. ನಾನಾ

ವಿಷ್ಣು ಪಾರಮ್ಯವನ್ನು ವಿವರಿಸುತ್ತ ಒಳಹೊರಗುಗಳಲ್ಲಿ ಗೋವಿಂದನಾಮವನ್ನು ಧರಿಸುವುದರಿಂದ ಅವನನ್ನು ಶರಣು ಹೋಗುವುದರಿಂದಲೇ ಮುಕ್ತಿ ಎಂದು ವ್ಯಾವರ್ಣಿಸಲಾಗಿದೆ.

## 5. ದೇಸಾಕ್ಷಿ

ಭಾವಮುಲೋನಾ ಬಾಹ್ಯಮುನಂದುನು,
ಗೋವಿಂದ ಗೋವಿಂದ ಯನಿ ಕೊಲುವವೋ ಮನಸಾ ! ಭಾವ

ಹರಿ ಯವತಾರಮುಲೇ ಯಖಿಲದೇವತಲು
ಹರಿಲೋನಿವೇ ಬ್ರಹ್ಮಾಂಡಂಬುಲು,
ಹರಿ ನಾಮಮುಲುಲೇ ಅನ್ನಿ ಮಂತ್ರಮುಲು
ಹರಿ ಹರಿ ಹರಿ ಹರಿಯನವೋ ಮನಸಾ ! ಭಾವ

ವಿಷ್ಣುನಿ ಮಹಿಮಲೇ ವಿಹಿತ ಕರ್ಮಮುಲು
ವಿಷ್ಣುನಿ ಪೊಗಡೆಡಿ ವೇದಂಬುಲು,
ವಿಷ್ಣು ಡೊಕ್ಕಡೇ ವಿಶ್ವಾಂತರಾತ್ಮುಡು
ವಿಷ್ಣುವು ವಿಷ್ಣುವನಿ ವೆದಕವೋ ಮನಸಾ ! ಭಾವ

ಅಚ್ಯುತು ಡಿತಡೇ ಅದಿಯು ನಂತ್ಯಮು
ಅಚ್ಯುತುಡೇ ಯಸುರಾಂತಕುಡು,
ಅಚ್ಯುತುಡು ಶ್ರೀ ವೇಂಕಟಾದ್ರಿ ಮಿಾದ ನಿದೆ
ಅಚ್ಯುತ ಅಚ್ಯುತ ಶರಣನವೋ ಮನಸಾ ಭಾವ

ವೆಂಕಟೇಶ್ವರಸ್ವಾಮಿ ಅನ್ನಮಯ್ಯನಿಗೆ ನವರತ್ನವಾಗಿ ಕಾಣುತ್ತಾನೆ. ಈ ದೇವಕೀಸುತನನ್ನು ಅವನ ವಿವಿಧ ರೂಪಗಳಲ್ಲಿ ಕಾಣುತ್ತ ಅವುಗಳನ್ನು ಒಂದೊಂದಾಗಿ ಒಂದೊಂದು ರತ್ನಕ್ಕೆ ಹೋಲಿಸುವ ಪದ.

## 6. ಸಾಳಂಗನಾಟಿ

ಮುದ್ದುಗಾರೇ ಯಶೋದ ಮುಂಗಿಟಿ ಮುತ್ಯಮು ವೀಡು
ತಿದ್ದರಾನಿ ಮಹಿಮಲ ದೇವಕೀ ಸುತುಡು. ಮುದ್ದು

ಅಂತ ನಿಂತ ಗೊಲ್ಲೆತಲ ಅರಚೇತಿ ಮಾಣಿಕಮು
ಪಂತಮಾಡೇ ಕಂಸುನಿ ಪಾಲಿ ವಜ್ರಮು,
ಕಾಂತುಲ ಮೂಡು ಲೋಕಾಲ ಗರುಡ ಪಚ್ಚಬೂಸ
ಚೆಂತಲ ಮಾಲೋ ನುನ್ನ ಚೆನ್ನಿ ಕೃಷ್ಣುಡು. ಮುದ್ದು

ರತಿಕೇಳಿ ರುಕ್ಮಿಣಿಕಿ ರಂಗುಮೋವಿ ಪಗಡಮು
ಮಿತಿ ಗೋವರ್ಧನಪು ಗೋಮೇಧಿಕಮು,
ಸತಮೈ ಶಂಖುಚಕ್ರಾಲ ಸಂದುಲ ವೈಡೂರ್ಯಮು
ಗತಿಯೈ ಮಮ್ಮುಗಾಚೇಟಿ ಕಮಲಾಕ್ಷುಡು. ಮುದ್ದು

ಕಾಳಿಂಗುನಿ ತಲಪೈಗಪ್ಪಿನ ಪುಷ್ಯರಾಗಮು
ಯೇಲೇಟಿ ಶ್ರೀ ವೇಂಕಟಾದ್ರಿ ಯಿಂದ್ರನೀಲಮು
ಪಾಲಜಲನಿಧಿ ಲೋನ ಬಾಯನಿ ದಿವ್ಯರತ್ನಮು
ಬಾಲುನಿವಲೆ ದಿರಿಗೀ ಬದ್ಮನಾಭುಡು. ಮುದ್ದು

ಮಕ್ಕಳಿಗೆ ಚಂದಮಾಮನನ್ನು ತೋರಿಸಿ ಹಾಡು ಹೇಳದ ತಾಯಿ ಯಾರುಂಟು. ಕವಿ ಚಂದ್ರನ ಬೆಳೆಯನ್ನು ವಿವರಿಸುತ್ತಾನೆ.

## 7. ರಾಮಕ್ರಿಯ

ಸಂದೆಕಾಡ ಬುಟ್ಟಿನಟ್ಟಿ ಚಾಯಲಪಂಟ ಯೆಂತ
ಚಂದಮಾಯ ಜೂಡರಮ್ಮ ಚಂದಮಾಮ ಪಂಟ. ಸಂದೆ



ಮುನುಪ ಬಾಲವೆಲ್ಲಿ ಮೊಲಚಿ ಪಂಡಿನ ಪಂಟ
ವಿನುವೈ ದೇವತಲಕು ನಿಚ್ಚ ಪಂಟ,
ಗೊನಕೊನಿ ಹರಿ ಕನ್ನು ಗೊನಚೂಪಲ ಪಂಟ
ವಿನುವೀಧಿ ನೆಗಡಿನ ವೆನ್ನೆಲಲ ಪಂಟ. ಸಂದೆ

ವಲರಾಜು ಪಂಪುನ ವಲಪು ವಿತ್ತಿನ ಪಂಟ
ಬಲುವೈಪುನ್ನಮನಾಟಿ ಜಾಜರಪಂಟ,
ಕಲಿಮಿ ಕಾಮಿನಿ ತೋಡ ಕಾರು ಕಮ್ಮಿನ ಪಂಟ
ಮಲಯುಚು ದಮಲೋನಿ ಮರ್ರಿಮಾನಿ ಪಂಟ. ಸಂದೆ

ವಿರಹುಲ ಗುಂಡೆಲಕು ವೆಕ್ಕಸಮೈನ ಪಂಟ
ಪರಗ ಚುಕ್ಕಲ ರಾಸಿ ಭಾಗ್ಯಮು ಪಂಟ,
ಅರುದೈ ತೂರುಪುಗೊಂಡ ನಾರಗ ಬಂಡಿನ ಪಂಟ
ಯಿರುವೈ ಶ್ರೀ ವೇಂಕಟೇಶು ನಿಂಟಿಲೋನಿ ಪಂಟ. ಸಂದೆ

ಅನ್ನಮಾಚಾರ್ಯರು ಬರೆದ ಮತ್ತೊಂದು ಸಂಸ್ಕೃತ ಸಮಾಸದ ಕೀರ್ತನೆ. ವೆಂಕಟೇಶನ ವಿವಿಧ ರೂಪಗಳನ್ನು ಇಲ್ಲಿ ಸರಳಪದಗಳಲ್ಲಿ ವಿವರಿಸಲಾಗಿದೆ.

## 8. ಧನ್ನಾಸಿ

ದೇವದೇವಂ ಭಜೇ ದಿವ್ಯ ಪ್ರಭಾವಂ
ರಾವಣಾಸುರವೈರಿ ರಣಪುಂಗವಂ. ದೇವ

ರಾಜವರಶೇಖರಂ ರವಿಕುಲ ಸುಧಾಕರಂ
ಆಜಾನುಬಾಹು ನೀಲಾಭ್ರಕಾಯಂ,
ರಾಜಾರಿ ಕೋದಂಡ ರಾಜ ದೀಕ್ಷಾಗುರುಂ
ರಾಜೀವಲೋಚನಂ ರಾಮಚಂದ್ರಂ. ದೇವ

ನೀಲಜೀಮೂತ ಸನ್ನಿಭ ಶರೀರಂ ಘನವಿ
ಶಾಲವಕ್ಷಂ ವಿಮಲ ಜಲಜನಾಭಂ,
ತಾಲಾಹಿ ನಗಹರಂ ಧರ್ಮ ಸಂಸ್ಥಾಪನಂ
ಭೂಲಲನಾಧಿಪಂ ಭೋಗಿ ಶಯನಂ. ದೇವ

ಪಂಕಜಾಸನ ವಿನುತ ಪರಮ ನಾರಾಯಣಂ
ಶಂಕರಾರ್ಜಿತ ಜನಕ ಚಾಪ ದಳನಂ,
ಲಂಕಾ ವಿಶೋಷಣಂ ಲಾಲಿತ ವಿಭೀಷಣಂ.
ವೇಂಕಟೇಶಂ ಸಾಧು ವಿಬುಧ ವಿನುತಂ. ದೇವ

ವೆಂಕಟೇಶನ ಸುಪ್ರಭಾತಗೀತೆ. ಬಿನ್ನಹಗಳು ಬೇರೆ ಬೇರೆಯಾಗಿರುವಂತೆ ಕವಿಗೆ ಪನ್ನಗ ಶಯನನ ಪರ್ಯಂಕ ಸೊಳ್ಳೆ ಪರದೆಯಂತೆಯೂ ಕಂಡುಬಂದಿದೆ ಎಂಬುದು ಇಲ್ಲಿನ ವಿಶೇಷ.

## 9. ಭೂಪಾಳಂ

ವಿನ್ನಪಾಲು ವಿನವಲೆ ವಿಂತ ವಿಂತಲು
ಪನ್ನಗಪು ದೋಮತೆರ ಪೈಕೆತ್ತ ವೇಲಯ್ಯಾ! ವಿನ್ನ

ತೆಲ್ಲವಾರೆ ಜಾಮೆಕ್ಕೆ ದೇವತಲು ಮುನುಲು
ಅಲ್ಲ ನಲ್ಲ ನಂತ ನಿಂತ ನದಿಗೋ ವಾರೇ,
ಚಲ್ಲನಿ ತಮ್ಮಿರೇಕುಲ ಸಾರಸಪು ಗನ್ನುಲು
ಮೆಲ್ಲಮೆಲ್ಲನೆ ವಿಚ್ಚಿ ಮೇಲುಕೊನ ವೇಲಯ್ಯಾ! ವಿನ್ನ

ಗರುಡ ಕಿನ್ನರ ಯಕ್ಷ ಕಾಮಿನುಲು ಗಮುಲೈ
ವಿರಹಪು ಗೀತಮುಲ ವಿಂತಾಲಾಪಾಲ,
ಪರಿಪರಿ ವಿಧಮುಲ ಬಾಡೇರು ನಿನ್ನದಿವೋ
ಸಿರಿಮೊಗಮು ದೆರಚಿ ಚಿತ್ತಗಿಂಚ ವೇಲಯ್ಯಾ! ವಿನ್ನ



ಪಂಕಪು ಶೇಷಾದುಲು ತುಂ ಬುರು ನಾರದಾದುಲು
ಪಂಕಜ ಭವಾದುಲು ನೀ ಪಾದಾಲು ಚೇರಿ,
ಅಂಕಿಲ ನುನ್ನಾರು ಲೇಚಿ ಅಲಮೇಲುಮಂಗನು
ವೇಂಕಟೇಶುಡಾ ರೆಪ್ಪಲು ವಿಚ್ಚಿ ಚೂಚಿ ಲೇವಯ್ಯಾ! ವಿನ್ನ

ಹರಿಯನ್ನು ಬಲ್ಲವನೆ ಕುಲಜನಾದವನು ಎಂದು ಸಮಾನತೆಯನ್ನು ಸಾಧಿಸುವ ಪ್ರಯತ್ನವಿಲ್ಲಿದೆ. ವೆಂಕಟೇಶ್ವರನ ದಾಸರೆಲ್ಲ ಒಂದೇ ಕುಲವೆನ್ನುವುದರಲ್ಲಿ ಸಮಾನತೆಯೂ ಇದೆ.

## 10. ಭೂಪಾಳಂ

ಏ ಕುಲಜು ಡೇಮಿ ಯೆವ್ವಡೈನ ನೇಮಿ
ಆಕಡ ನಾತಡೆ ಹರಿ ನೆರಿಗಿನವಾಡು. ಏಕು

ಪರಿಗಿನ ಸತ್ಯ ಸಂಪನ್ನುಡೈನ ವಾಡೇ
ಪರನಿಂದ ಸೇಯದತ್ವರುಡು ಗಾನಿವಾಡು,
ಅರುದೈನ ಭೂತ ದಯಾನಿಧಿ ಯಗುವಾಡೇ
ಪರುಲು ದಾನೇ ಯನಿ ಭಾವಿಂಚುವಾಡು. ಏಕು

ನಿರ್ಮಲುಡೈ ಯಾತ್ಮನಿಯತಿ ಗಲುಗುವಾಡೇ
ಧರ್ಮತತ್ಪರತ ಬುದ್ಧಿಗಲಿಗಿನ ವಾಡು,
ಕರ್ಮಮಾರ್ಗಮುಲು ಗಡವನಿ ವಾಡೇ
ಮರ್ಮಮೈ ಹರಿಭಕ್ತಿ ಮರವನಿವಾಡು. ಏಕು

ಜಗತಿಪೈ ಹಿತಮುಗಾ ಜರಿಯಿಂಚುವಾಡೇ
ಪಗಲೇಕ ಮತಿಲೋನ ಬ್ರದಿಕೇವಾಡು,
ತೆಗಿ ಸಕಲಮು ನಾತ್ಮದೆಲಿಸಿವಾಡೇ
ತಗಿಲಿ ವೇಂಕಟೇಶು ದಾಸು ಡಯಿನವಾಡು. ಏಕು

ಯಶೋದೆಗೆ ಮಗುವಾದವನೇ ಬ್ರಹ್ಮನ ತಂದೆಯಾದವನು. ನಿಖಿಲ ವೇದಗಳು ಸಾರಿ ಹೇಳುವ ಸಮುದ್ರವೇ ಈತ ಎಂದು ವೆಂಕಟಾಧಿಪನ ವಿಶೇಷ ಗುಣಗಳನ್ನು ವಿವರಿಸುತ್ತಿದ್ದಾನೆ.

## 11. ಶುದ್ಧವಸಂತಂ

ಚೇರಿ ಯಶೋದಕು ಶಿಶು ವಿತಡು
ಧಾರುಣಿ ಬ್ರಹ್ಮಕು ದಂಡ್ರಿಯು ನಿತಡು. ಚೇರಿ

ಸೊಲಸಿ ಚೂಚಿನನು ಸೂರ್ಯಚಂದ್ರುಲನು
ಲಲಿ ವೆದಚಲ್ಲೆಡು ಲಕ್ಷ್ಮಣುಡು,
ನಿಲಿಚಿ ನಿಲುವುನ ನಿಖಿಲ ದೇವತಲ
ಕಲಿಗಿಂಚು ಸುರಲ ಗನಿವೋ ಯಿತಡು. ಚೇರಿ

ಮಾಟಲಾಡಿನನು ಮರಿ ಯಜಾಂಡಮುಲು
ಕೋಟುಲು ವೊಡಮೆಡಿ ಗುಣರಾಶಿ,
ನೀಟಗು ನೂರ್ಪುಲ ನಿಖಿಲ ವೇದಮುಲು
ಚಾಟುನ ನೂರೇಟಿ ಸಮುದ್ರ ಮಿತಡು. ಚೇರಿ

ಮುಂಗಿಟ ಪೊಲಸಿನ ಮೊಹನ ಮಾತ್ಮಲ
ದೋಗಿಂಚೇ ಘನ ಪುರುಷುಡು,
ಸಂಗತಿ ಮಾವಂಟಿ ಶರಣಾಗತುಲಕು
ಸಂಗಮು ಶ್ರೀ ವೇಂಕಟಾಧಿಪು ಡಿತಡು. ಚೇರಿ

ನಮಗೆ ಕಾಮಧೇನು ಕಲ್ಪವೃಕ್ಷ ಚಿಂತಾಮಣಿಯಾದ ನಿನಗೆ ಶರಣಾಗತರಾಗಿದ್ದೇವೆ ನಮ್ಮನ್ನು ಉದ್ಧಾರ ಮಾಡಿರುವೆ ನೀನು ಎಂದು ಅನ್ನಮಯ್ಯ ವೆಂಕಟೇಶ್ವರಸ್ವಾಮಿಗೆ ನಮನ ಸಲ್ಲಿಸಿದ್ದಾನೆ ಇಲ್ಲಿ.

## 12. ಶಂಕರಾಭರಣಂ

ಪೊಡಗಂಟಿ ಮಯ್ಯ ಮಿಮ್ಮು ಪುರುಷೋತ್ತಮಾ ! ಮಮ್ಮು
ನೆಡಯಕವಯ್ಯ ಕೋನೇಟಿ ರಾಯಡಾ ! ಪೊಡ

ಕೋರಿ ಮಮ್ಮು ನೇಲಿನಟ್ಟಿ ಕುಲದೈವಮಾ ! ಚಾಲ
ನೇರಿಚಿ ಪೆದ್ದಲಿಚ್ಚಿನ ನಿಧಾನಮಾ !
ಗಾರವಿಂಚಿ ದಪ್ಪಿದೀರ್ಚ ಕಾಲಮೇಘಮಾ ! ಮಾಕು
ಚೇರುವ ಜಿತ್ತಮುಲೋನಿ ಶ್ರೀನಿವಾಸುಡಾ ! ಪೊಡ

ಭಾವಿಂಪ ಗೈವಸಮೈನ ಪಾರಿಜಾತಮಾ ! ಮಮ್ಮು
ಚೇವ ದೇರ ಗಾಚಿನಟ್ಟಿ ಚಿಂತಾಮಣೀ !
ಕಾಮಿಂಚಿ ಕೋರಿಕ ಲಿಚ್ಚೇ ಕಾಮಧೇನುವಾ ! ಮಮ್ಮು
ತಾವೈ ರಕ್ಷಿಂಚೇಟಿ ಧರಣೀಧರಾ ! ಪೊಡ

ಚೆಡನೀಕ ಬ್ರದಿಕಿಂಚೇ ಸಿದ್ಧಮಂತ್ರಮಾ ! ರೋಗಾ
ಲಡಚಿ ರಕ್ಷಿಂಚೇ ದಿವ್ಯೌಷಧಮಾ !
ಬಡಿ ಬಾಯಕ ತಿರಿಗೇ ಪ್ರಾಣಬಂಧುಡಾ ! ಮಮ್ಮು
ಗಡಿಯಿಂಚಿನಟ್ಟಿ ಶ್ರೀ ವೇಂಕಟನಾಥುಡಾ ! ಪೊಡ

ಅಲಮೇಲು ಮಂಗ ಶ್ರೀನಿವಾಸನ ಅರ್ಧಾಂಗಿ, ಆಕೆ ತನ್ನ ವಿಭುವಿಗಾಗಿ ನಾಟ್ಯವಾಡಿದ ರೀತಿಯನ್ನಿಲ್ಲಿ ವರ್ಣಿಸಿದ್ದಾನೆ ತಿರುವೆಂಕಟಪತಿ ಮೆಚ್ಚುವಂತಹ ಆ ನಾಟ್ಯದ ಸೊಬಗು ಜೀವಾತ್ಮದ್ದೂ ಆಗಬಹುದು.

## 13. ಶಂಕರಾಭರಣಂ

ಅಲರುಲು ಗುರಿಯಗನಾಡೆ ನದೇ
ಅಲಕಲ ಗಲುಕುಲನಲಮೇಲು ಮಂಗ. ಅಲ

ಅರವಿರಿ ಸೊಬಗುಲನತಿವಲು ಮೆಚ್ಚಗ
ಅರತೆರ ಮರುಗುನನಾಡೆ ನದೇ,
ವರುಸಗ ಪೂರ್ವ ದುವಾಳಪು ತಿರುಪುಲ
ಹರಿ ಗರಗಿಂಪುಚುನಲಮೇಲು ಮಂಗ. ಅಲ

ಮಟ್ಟಪು ಮಲಪುಲ ಮಟ್ಟಿಲ ಕೆಲಕುಲ
ತಟ್ಟಿಡಿ ನಡಪುಲದಾಟಿ ನದೇ,
ಪೆಟ್ಟಿನ ವಜ್ರಪು ಪೆಂಡೆಪು ದಳುಕುಲು
ಅಟ್ಟಿಟು ಚಿಮ್ಮುಚುನಲಮೇಲು ಮಂಗ. ಅಲ

ಚೆಂದುಲ ಪಾಟಲ ಶಿರಿಪೊಲಯಾಟಲ
ಅಂದೆಲ ಮ್ರೋತಲನಾಡೆ ನದೇ,
ಕಂದುವ ತಿರು ವೇಂಕಟಪತಿ ಮೆಚ್ಚಗ
ಅಂದಪು ತಿರುಪುಲನಲಮೇಲು ಮಂಗ. ಅಲ

ಅಲಮೇಲು ಮಂಗೆಯನ್ನು ಮೆಚ್ಚುವ ಕೀರ್ತನೆ. ಆ ತಾಯಿಗೆ ಜಯಕಾರ ಹಾಕುವ, ಆಕೆಯ ಹಾವ ಭಾವಗಳನ್ನು ಮೆಚ್ಚಿ ವೆಂಕಟಪತಿಗೆ ಅದೆಲ್ಲ ಪ್ರಿಯವಾಗಿವೆ ಎಂಬ ಸೂಚನೆಯ ಕೀರ್ತನೆ.

## 14. ಪಾಡಿ

ಚಕ್ಕನಿ ತಲ್ಲಿಕಿ ಚಾಂಗುಭಳಾ ತನ
ಚಕ್ಕೆರ ಮೋವಿಕಿ ಚಾಂಗುಭಳಾ ! ಚಕ್ಕ

ಕುಲಿಕೆಡು ಮುರಿಪೆಪು ಕುಮ್ಮರಿಂಪು ತನ
ಸಳುಪು ಜೂಪುಲಕು ಚಾಂಗುಭಳಾ !
ಪಲುಕುಲ ಸೊಲಪುಲ ಬತಿತೋ ಗಸರೆಡಿ
ಚಲಮುಲ ಯಲುಕಕು ಚಾಂಗುಭಳಾ ! ಚಕ್ಕ

ಕಿನ್ನೆರತೋ ಪತಿ ಕೆಲನ ನಿಲುಚು ತನ
ಚನ್ನು ಮೆರುಗುಲಕು ಚಾಂಗುಭಳಾ !
ಉನ್ನತಿ ಬತಿಪೈ ನೊರಗಿ ನಿಲುಚು ತನ
ಸನ್ನಪು ನಡಿಮಿಕಿ ಚಾಂಗುಭಳಾ ! ಚಕ್ಕ

ಜಂದೆಪು ಮುತ್ಯಪು ಸರುಲ ಹಾರಮುಲ
ಚಂದನ ಗಂಧಿಕಿ ಚಾಂಗುಭಳಾ !
ವಿಂದಯಿ ವೇಂಕಟವಿಭು ಪೆನಚಿನ ತನ
ಸಂದಿ ದಂಡಲಕು ಚಾಂಗುಭಳಾ !! ಚಕ್ಕ

ಅಲಮೇಲು ಮಂಗಾದೇವಿಗೆ ಆರತಿಯ ಹಾಡು. ಆಕೆಯ ವಿವಿಧ ಅಂಗಾಂಗಳಿಗೆ ವಿವಿಧ ರೀತಿಯ ನೀರಾಜನ ವೆತ್ತುವ ಕೀರ್ತನೆ.

## 15. ಮಂಗಳ ಕೌಶಿಕ

ಕ್ಷೀರಾಬ್ಧಿ ಕನ್ಯಕಕು ಶ್ರೀ ಮಹಾಲಕ್ಷ್ಮಿಕಿನಿ
ನೀರಜಾಲಯಮುನಕು ನೀರಾಜನಂ ಕ್ಷೀರಾ

ಜಲಜಾಕ್ಷಿ ಮೋಮುನಕು ಜಕ್ಕುವ ಕುಚಂಬುಲಕು
ನೆಲಕೊನ್ನ ಕಪ್ಪುರಪು ನೀರಾಜನಂ,
ಅಲಿವೇಣಿ ತುರುಮುನಕು ಹಸ್ತಕಮಲಂಬುಲಕು
ನಿಲುವು ಮಾಣಿಕ್ಯಮುಲ ನೀರಾಜನಂ ಕ್ಷೀರಾ

ಚರಣಕಿಸಲಮಯಮುಲಕು ಸಕಿಯ ರಂಭೋರುಲಕು
ನಿರತಮಗು ಮುತ್ತೇಲ ನೀರಾಜನಂ,
ಅರಿದಿ ಜಘನಂಬುನಕು ಅತಿವ ನಿಜನಾಭಿಕಿನಿ
ನಿರತಿ ನಾನಾವರ್ಣ ನೀರಾಜನಂ ಕ್ಷೀರಾ

ಪಗಟು ಶ್ರೀ ವೇಂಕಟೇಶು ಪಟ್ಟಪುರಾಣಿಯೈ
ನೆಗಡು ಸತಿ ಕಳಲಕುನು ನೀರಾಜನಂ,
ಜಗತಿ ನಲಮೇಲ್ಮಂಗ ಚಕ್ಕದನಮುಲ ಕೆಲ್ಲ
ನಿಗುಡು ನಿಜಶೋಭನಪು ನೀರಾಜನಂ ಕ್ಷೀರಾ

* * *

ಶ್ರಿಯಃ ಕಾಂತಾಯ ಕಲ್ಯಾಣ
ನಿಧಯೇ ನಿಧಯೇಽರ್ಥಿನಾಮ್
ಶ್ರೀವೇಂಕಟನಿವಾಸಾಯ
ಶ್ರೀನಿವಾಸಾಯ ಮಂಗಳಮ್

ಮಂಗಳಾಶಾಸನಪರೈಃ
ಮದಾಚಾರ್ಯ ಪುರೋಗಮೈಃ
ಸರ್ವೈಶ್ಚ ಪೂರ್ವೈರಾಚಾರ್ಯೈಃ
ಸತ್ಕೃತಾಯಾಸ್ತು ಮಂಗಳಮ್



# ಶ್ರೀವೆಂಕಟೇಶ್ವರಸ್ವಾಮಿ ಆಲಯ

---ಆಂಗ್ಲಮೂಲ - ಡಾ|| ಎನ್. ರಮೇಶನ್.

---ಅನುವಾದ - ಬಿ. ಎನ್. ಶ್ರೀನಿವಾಸನ್.

## ಭೌಗೋಳಿಕ ಸನ್ನಿವೇಶ

ದಕ್ಷಿಣ ಭಾರತದೇಶದ ೧೩-೧೪ ಅಕ್ಷಾಂಶಗಳ ಮಧ್ಯದಲ್ಲಿ ೭೯ ಪೂರ್ವರೇಖಾಂಶದಲ್ಲಿರುವ ಭೂಭಾಗದಲ್ಲಿ ವ್ಯಾಪಿಸಿರುವ ತಿರುಮಲೆ ಬೆಟ್ಟಗಳೆಂಬ ಪರ್ವತಶ್ರೇಣಿ ದೇಶದಲ್ಲಿಯೇ ಒಂದು ಭೌಗೋಳಿಕ ವಿಶೇಷವೆನಿಸಿದೆ.

ಇದನ್ನು ತಿರುಮಲೆ ಪರ್ವತ ಪಂಕ್ತಿ ಎನ್ನುವರು. ಇಲ್ಲಿ ಏಳು ಮುಖ್ಯ ಶಿಖರಗಳಿವೆ. ಎಲ್ಲವೂ ಅತಿ ಪವಿತ್ರವಾಗಿರುವ ಪುರಾಣಕಥೆಗಳಿಗೆ ಸಂಬಂಧಿಸಿವೆ. ಇವುಗಳಲ್ಲಿ ಅತಿಮುಖ್ಯವಾದ ಶೇಷಾಚಲದ ಮೇಲೆ ತಿರುಮಲೆಯ ದೇವಾಲಯವಿದೆ. ಇದರಿಂದಾಗಿಯೇ ಇಡೀ ಪರ್ವತ ಶ್ರೇಣಿ ಶೇಷಾಚಲವೆಂದು ಕರೆಯಲ್ಪಡುತ್ತದೆ.

ಆಂಧ್ರಪ್ರದೇಶದಲ್ಲಿನ ಉತ್ತರಭಾಗದಲ್ಲಿ ಆರಂಭವಾಗುವ ಪೂರ್ವ ಘಟ್ಟಗಳು ಸಮುದ್ರತೀರದಲ್ಲಿ ಅನತಿದೂರದಲ್ಲಿ ಕೆಳಕ್ಕೆ ದಕ್ಷಿಣಕ್ಕಿಳಿದು ಕೃಷ್ಣಾನದಿಯನ್ನು ದಾಟಿದ ನಂತರ ಅನೇಕ ಕವಲುಗಳಾಗಿ ಸಮಾನಾಂತರ ಶಾಖೆಗಳಾಗಿ ಮದ್ರಾಸಿನವರೆಗೆ ಎಂದರೆ ೧೩ನೇ ಉತ್ತರ ಅಕ್ಷಾಂಶದವರೆಗೆ ವ್ಯಾಪಿಸಿವೆ. ಇಂತಹ ಸಮಾನಾಂತರ ಶ್ರೇಣಿಗಳು ಮೂರನ್ನು ನೋಡಬಹುದು. ಮೊದಲನೆಯದು ಸಮುದ್ರ ತೀರದಲ್ಲಿನದು. ಎರಡನೆಯದು ಕೃಷ್ಣಾನದಿಯ ದಕ್ಷಿಣದಲ್ಲಿ ಕರ್ನೂಲಿನಿಂದ ಆರಂಭವಾಗಿ ಅರ್ಧವೃತ್ತಾಕಾರದಲ್ಲಿ ಕಡಪ ಪ್ರಾಂತವನ್ನು ಸೇರಿ ಅಲ್ಲಿ ಗುಡ್ಡಗಳ ಗುಂಪಾಗಿ ಕಾಣುತ್ತದೆ. ಇವುಗಳಲ್ಲಿ ಒಂದು ಶೇಷಾಚಲ. ಮತ್ತೊಂದು ಶಾಖೆ ದಕ್ಷಿಣಕ್ಕಿಳಿದು ಮತ್ತೆ ತೀರಪ್ರಾಂತದಲ್ಲಿ ಮದ್ರಾಸಿಗೆ ಉತ್ತರದಲ್ಲಿ ಪೊನ್ನೇರಿಯನ್ನು ಸೇರುವುದು. ಮೂರನೇ ಶ್ರೇಣಿ ಹಲವಾರು ಬಳುಕುಗಳಿಂದಲೂ ಅಷ್ಟೇನೂ ಎತ್ತರವಲ್ಲದ ಮೈಸೂರು ಪ್ರಸ್ಥಭೂಮಿಯಲ್ಲಿ ಆರಂಭವಾಗಿ ಅನಂತಪುರ ಕರ್ನೂಲು ಜಿಲ್ಲೆಗಳಲ್ಲಿ ಹರಡಿದೆ. ಈ ಮೂರರಲ್ಲಿ ಮಧ್ಯದ ಕರ್ನೂಲು ಜಿಲ್ಲೆಯ ಪರ್ವತಗಳು ನಲ್ಲಮಲೆಯೆಂದು ಪ್ರಸಿದ್ಧ. ಇದು ದಕ್ಷಿಣಕ್ಕೆ ಹರಡಿ ಪೂರ್ವದ ತೀರಪ್ರಾಂತದ ಸಾಲಿನಲ್ಲಿ.ಅದನ್ನು ತಿರುಪತಿ, ಕಾಳಹಸ್ತಿ ಪ್ರಾಂತದಲ್ಲಿ ಸೇರುವುದು. ಈ ಪರ್ವತಾವಳಿ ಮದ್ರಾಸಿಗೆ ಅರ್ಧ ಡಿಗ್ರಿ ಉತ್ತರದಲ್ಲಿ ಒಂದು ಗಡಿಯನ್ನು ಏರ್ಪಡಿಸಿದೆ. ಪೂರ್ವದಲ್ಲಿನ ಪೊನ್ನೇರಿಯವರೆಗೆ ಪೂರ್ವ ಶಾಖೆಯಾಗಿರುವುದರಿಂದ ತಿರುಮಲೆಯು ಪೂರ್ವ ಶಾಖೆಯ ಭಾಗಮಾತ್ರವೇ. ಇದು ದಕ್ಷಿಣದಲ್ಲಿ ಅನಮಲೆಯಿಂದ ಹೊರಟು ಕೊಯಮತ್ತೂರು ಜಿಲ್ಲೆಯ ಮೂಲಕ ಮೈಸೂರಿನ ಗಡಿಪ್ರಾಂತವಾಗಿ ಹರಡಿ ಚಿತ್ತೂರು ಜಿಲ್ಲೆಯ ಪಲಮನೇರನ್ನು ಸೇರುವುದು. ತುಸು ಈಶಾನ್ಯದಿಕ್ಕಿನಲ್ಲಿ ತಲಕೋನ ಜಲಪಾತದವರೆಗೆ ಹೋಗಿ ಅಲ್ಲಿ ಮತ್ತೆ ಪೂರ್ವಕ್ಕೆ ತಿರುಗಿ ತಿರುಮಲೆಯನ್ನು ಸೇರುತ್ತದೆ. ತಿರುಮಲೆಗೆ ಪೂರ್ವದ ಒಂದು ತಪ್ಪಲಿನಲ್ಲಿ ಇದರ ಕೊನೆ. ತಲಕೋನವದಿಂದ ತಿರುಮಲೆಯ ಮಧ್ಯದಲ್ಲಿ ಹದ್ದು ಹಾರಿದಂತೆ ೧೨ ಮೈಲಿದೂರ. ಆದರೆ ಬೆಟ್ಟದ ಮೇಲೆ ಕಾಡಿನಲ್ಲಿ ನಡೆಯುವ ಹಾದಿ ಸುಮಾರು ೨೦ ಮೈಲಿಯಾಗುವುದು. ಈ ಭಾಗವೆಲ್ಲ ಬಹು ಪ್ರಾಚೀನ ಕಾಲದಿಂದಲೇ ಪವಿತ್ರವೆಂದು ಭಾವಿಸಲ್ಪಟ್ಟಿದೆ. ತಲಕೋನ ಜಲಪಾತದಿಂದ ಸುರಿಯುವ ನೀರಿಗೆ ಪಾಪನಾಶನಂ ಜಲಪಾತ ಪಶ್ಚಿಮ ಗಡಿಯೆಂದು ತಿಳಿಯಲಾಗಿದೆ.

ತಲಕೋನ ಜಲಪಾತ ಹಾಗೂ ಆ ಝರಿ ಎರಡೂ ಅಲ್ಲಿನ ಬೆಟ್ಟದಲ್ಲಿ ಉತ್ತರದಿಂದ ಪೂರ್ವಕ್ಕೆ ತಿರುಗುತ್ತವೆಯಾಗಿ ಅಲ್ಲಿ ಪ್ರಕೃತಿ ಸಿದ್ಧವಾದ ಬಳುಕುಗಳಿವೆ. ಇಲ್ಲಿ ಬೆಟ್ಟ ಉತ್ತರದಲ್ಲಿ ಸುಮಾರು ೩೫೮೩ ಅಡಿ ಎತ್ತರ ಹಾಗೂ ಪೂರ್ವ ದಕ್ಷಿಣಗಳಲ್ಲಿ ೩೮೦೦ ಅಡಿ ಎತ್ತರವಾಗಿದೆ. ನಿರಂತರ ಪ್ರವಾಹವಿರುವ ಜಲಪಾತದ ಎತ್ತರ ಸುಮಾರು ೨೦೦ ಅಡಿಗಳು. ಬೆಟ್ಟದ ಪಶ್ಚಿಮದ ಮೈದಾನ ಸಮುದ್ರ ಮಟ್ಟಕ್ಕೆ ೧೮೦೦ - ೨೦೦೦ ಅಡಿ ಎತ್ತರ. ಈ ಕಣಿವೆ ಪ್ರಕೃತಿದತ್ತ ಸೌಂದರ್ಯದಿಂದ ಹಸಿರು ಕಾಡಿನಿಂದ ತುಂಬಿದೆ. ಬೆಟ್ಟ ಮೈದಾನದ ಕಡೆಗೆ ನೀಟಾಗಿ ವಾಲಿದೆ. ಬೆಟ್ಟಕ್ಕೆ ಹೊಂದಿಕೊಂಡಂತೆ ಪಶ್ಚಿಮದಲ್ಲಿ ಸಿದ್ಧೇಶ್ವರನ ಗುಡಿಯಿದೆ. ಈ ಜಲಪಾತ ಬೆಟ್ಟದಲ್ಲಿರುವ ಅನೇಕ ಜಲ



ಪಾತಗಳಲ್ಲಿ ಮೊದಲನೆಯದಾಗಿರುವ ಇದನ್ನು ತಲಕೋನ ಎಂದು ಕರೆಯುವರು. ಪ್ರಾಚೀನ ಕಾಲದಲ್ಲಿದು ತಮಿಳು ನಾಡಿಗೂ, ಬಡಗನಾಡಿಗೂ ಸರಹದ್ದಿನ ಪ್ರಾಂತವಾಗಿದ್ದಿತು. ಬಡಗುದೇಶವೆಂದರೆ ಇಂದು ಕನ್ನಡ ತೆಲುಗು ಮಾತನಾಡುವ ಜನರಿರುವ ದೇಶ. ಈ ಸರಹದ್ದಿನಲ್ಲಿ ವೇಂಗಡ ಅಥವಾ ತಿರುಮಲೆ ಒಂದು ಮುಖ್ಯವಾದ ಸ್ಥಳ. ಮೇಲೆ ವಿವರಿಸಿದ ಮಧ್ಯಗಿರಿಪಂಕ್ತಿಯನ್ನು ಪುರಾಣಗಳಲ್ಲಿ ಮಲಗಿರುವ ಸರ್ಪಕ್ಕೆ ಹೋಲಿಸಿ ವರ್ಣಿಸಲಾಗಿದೆ. ಇದರ ಬಾಲದಲ್ಲಿ ಶ್ರೀಶೈಲವಿದ್ದು ಅಲ್ಲಿ ಮಲ್ಲಿಕಾರ್ಜುನ ದೇವಾಲಯವೂ, ಅಹೋಬಿಲದಲ್ಲಿನ ನರಸಿಂಹ ಸ್ವಾಮಿ ಆಲಯವನ್ನು ದೇಹಭಾಗವಾಗಿಯೂ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯವನ್ನು ಫಣಾಗ್ರವಾಗಿಯೂ, ಕಾಳಹಸ್ತಿಯ ಶ್ರೀಕಾಳಹಸ್ತೀಶ್ವರಸ್ವಾಮಿ ಆಲಯವನ್ನು ಮುಖಾಗ್ರ ಭಾಗವೆಂದೂ ವರ್ಣಿಸಿದ್ದಾರೆ.

ತಿರುಪತಿ ತಿರುಚಾನೂರುಗಳು ಒಂದು ವಿಸ್ತಾರವಾದ ಕಣಿವೆಯಲ್ಲಿ ಪರ್ವತರಾಜಿಯಿಂದ ಆವರಿಸಲ್ಪಟ್ಟಿವೆ. ಈ ಸಾಲಿನಲ್ಲಿ ಉತ್ತರಕ್ಕೆ ತಿರುಮಲೆಯಿದೆ. ತಿರುಪತಿ ನಗರ ಇದಕ್ಕೆ ಎರಡು ಮೈಲು ದೂರದಲ್ಲಿ (ಹದ್ದು ಹಾರಿದಂತೆ)ಇದೆ.

ಶ್ರೀ ವೆಂಕಟೇಶ್ವರನ ಆಲಯವಿರುವ ದೆಟ್ಟ ವೆಂಕಟಾಚಲವೆಂದು ಪ್ರಸಿದ್ಧವಾಗಿದೆ. ಇದು ಸ್ವಲ್ಪ ಹಳ್ಳದಂತೆ ಇದ್ದು ಸುತ್ತಲು ಎತ್ತರವಾದ ದೆಟ್ಟಗಳಿವೆ. ಶ್ರೀಶೈಲದಲ್ಲಿ ಮಲ್ಲಿಕಾರ್ಜುನಸ್ವಾಮಿ ಆಲಯವೂ ಹೀಗೆಯೇ ಇದೆ. ವೆಂಕಟೇಶ್ವರಾಲಯವನ್ನು ಸೇರಲು ಐದು ಮಾರ್ಗಗಳಿವೆ. ಇವುಗಳಲ್ಲಿ ಎರಡು ತಿರುಪತಿಯಿಂದ ಹೊರಡುವುವು. ಒಂದು ಮೆಟ್ಟಿಲ ಮಾರ್ಗ - ೭ ಮೈಲಿದೂರದ್ದು. ಎರಡನೆಯದು ಮೋಟಾರು ವಾಹನಗಳ ಮಾರ್ಗ. (ಈಗ ಮೇಲೇರಲಿಕ್ಕೆ ಒಂದು, ಕೆಳಗಿಳಿಯಲಿಕ್ಕೆ ಮತ್ತೊಂದು - ಹೀಗೆ ಎರಡು ಮೋಟಾರು ಮಾರ್ಗಗಳು.) ಮೂರನೆಯದು ಚಂದ್ರಗಿರಿಯಿಂದ - ಶ್ರೀವಾರಿಮೆಟ್ಟು ಮುಖಾಂತರವಾದದ್ದು. ನಾಲ್ಕನೆಯದು ಮಾಮಂಡೂರು ರೈಲ್ವೆ ಸ್ಟೇಷನ್ನಿನಿಂದಲೂ, ಐದನೆಯದು ನಾಗಪಟ್ಟಣದ ಕಡೆಯಿಂದಲೂ ಹೊರಡುವುದು.

ತಿರುಮಲೆಯ ಗುಡಿಗೆ ಸಂಬಂಧಿಸಿದಂತೆ ಎರಡು ಕಣಿವೆಗಳು ಪ್ರಮುಖವಾದವು. ಒಂದು ಪೂರ್ವದಲ್ಲಿನ ಪಾಪನಾಶನಂ ಕಣಿವೆ. ಎರಡನೆಯದು ಅವಚಾರಿ ಕಣಿವೆ. ಇವುಗಳಲ್ಲಿ ಪಾಪನಾಶನಂ ಕಣಿವೆ ದೆಟ್ಟದ ಮೇಲೆ ಉತ್ತರಕ್ಕೆ ಹರಿಯುವ ನೀರನ್ನು ಸಂಗ್ರಹಿಸಿದರೆ, ಅವಚಾರಿ ವಂಕ ದೆಟ್ಟದ ಆಗ್ನೇಯ ಭಾಗದ ನೀರನ್ನು ಗ್ರಹಿಸುತ್ತದೆ. ಎರಡೂ ಕಣಿವೆಗಳೂ ಅನೇಕ ಪವಿತ್ರ ತೀರ್ಥಗಳನ್ನು ಹೊಂದಿ ಪ್ರಸಿದ್ಧವಾಗಿವೆ.

ಸಾಮಾಜಿಕ ಆರ್ಥಿಕ ಸ್ಥಿತಿಗಳಂತೆಯೇ ತಮಿಳು - ತೆಲುಗು ದಾಕ್ಷಿಣಾತ್ಯ ಸಂಸ್ಕೃತಿಗಳ ಸಮ್ಮೇಳನವೇ ಇಲ್ಲಿನ ಮುಖ್ಯ ಲಕ್ಷಣವಾಗಿದೆ. ತಿರುಮಲೆಯ ಆಲಯವಿರುವ ದೆಟ್ಟವೇ ವಿಶಿಷ್ಟವಾದದ್ದು. ಶಿಲಪ್ಪದಿಕಾರದಲ್ಲಿ ಹೀಗೆ ಹೇಳಲಾಗಿದೆ.

"ವೆಂಗಡಮೆನ್ನು ಎಂಗುಯಿರ್
ಮಲೈಯತ್ತುಚ್ಚಿ ಮಿವನ್ನೈ"

--ಈ ಸ್ವಾಮಿ ಉಚ್ಚಿಯಿಲ್ ನಿನ್ರಾನ್ - ಎಂದರೆ ಉನ್ನತ ಸ್ಥಳದಲ್ಲಿ ನಿಂತವನು ಎಂಬುದು ೧೩ನೇ ಶತಕದ ಮಧ್ಯಭಾಗದವರೆಗೆ ಪ್ರಸಿದ್ಧವಾದ ಮಾತು. ಆದರೆ ಆ ದೇವರ ಗುಡಿ ಸುತ್ತಲಿರುವ ಪ್ರದೇಶಕ್ಕಿಂತ ತಗ್ಗಿನಲ್ಲಿದೆ ಎಂಬುದನ್ನು ನಂತರದಲ್ಲಿಯೇ ಗುರುತಿಸಿ ದಾಖಲಿಸಲಾಯಿತು. ಗುಡಿಯು ೩೪೨೭ ಅಡಿ ಎತ್ತರದ ದೆಟ್ಟದ ಮೇಲಿದೆ. ಸ್ವಲ್ಪದೂರದ ಜಾಬಾಲಿ ತೀರ್ಥ ೩೧೭೭ ಅಡಿ ಎತ್ತರದಲ್ಲಿದೆ. ಪೂರ್ವಕ್ಕೆ ದೆಟ್ಟವು ೨೨೫೦ - ೨೭೫೦ ಅಡಿಗಳೂ, ದಕ್ಷಿಣದಲ್ಲಿ ೪೯೨೦ ಅಡಿಗಳೂ, ನೈಋತ್ಯಕ್ಕಿರುವ ನಾರಾಯಣಗಿರಿಯು ೩೬೨೦ ಅಡಿ ಎತ್ತರವೂ ಆಗಿದೆ.

ತಿರುಮಲೆಯಿರುವ ಚಿತ್ತೂರು ಮಂಡಲದ ಭಾಗ ಮೈಸೂರು ಪ್ರಸ್ಥಭೂಮಿಯ ಮೂಲಕ ಹಾಯ್ದಿರುವ ಹಾಸುಗಲ್ಲಿನ ಶಿಲಾಖಂಡಗಳಿಂದುಂಟಾಗಿದೆ. ಪೂರ್ವಕ್ಕೆ ಹೋದಂತೆಲ್ಲ ಗುಡ್ಡಗಳು ವಿರಳವಾಗುತ್ತ ಅಲ್ಲಲ್ಲಿ ಹಲವು ಎತ್ತರವಾಗಿ ಕಂಡುಬರುತ್ತವೆ. ವೆಲಿಗೊಂಡದ ದಕ್ಷಿಣದ ಕೊನೆ, ತಿರುಮಲೆ ದೆಟ್ಟಗಳು, ಮಾಮಂಡೂರು ಕಣಿವೆಗಳಲ್ಲಿ ಹಿಟ್ಟುಗಲ್ಲು, ದೆಣಚುಕಲ್ಲುಗಳಿಂದ ಕೂಡಿದೆ. ಅತಿ ವಿಸ್ತಾರವಾದ ಹಾಸುಗಲ್ಲುಗಳು ಹೆಚ್ಚಾಗಿ ಶೇಷಾಚಲ ಪಂಕ್ತಿಯ ದೆಟ್ಟಗಳಲ್ಲಿ ಮನೋಹರವಾಗಿ ಕಂಡುಬರುತ್ತವೆ.

## ಹವಾಮಾನ :

ಇಲ್ಲಿನ ಹವಾಮಾನ ಹದವಾಗಿ ಅನುಕೂಲವಾಗಿರುವುದು. ನಾಲ್ಕು ಋತುಗಳೂ ಕ್ರಮವಾಗಿ ಉಂಟಾಗುತ್ತವೆ. ಡಿಸೆಂಬರ್ - ಫೆಬ್ರವರಿ ತಿಂಗಳು - ತಂಪಾಗಿದ್ದು, ಮಾರ್ಚ್ - ಮೇ ತಿಂಗಳುಗಳು ಬೇಸಿಗೆಯಾಗಿಯೂ ಜೂನ್ ಸೆಪ್ಟಂಬರ್ ಮಧ್ಯದಲ್ಲಿ ನೈಋತ್ಯ ಪವನಗಳಿಂದಾಗಿ ಮಳೆಗಾಲವೂ ಅಕ್ಟೋಬರ್ - ನವಂಬರ್ ಮಧ್ಯೆ ಈಶಾನ್ಯಪವನಗಳಿಂದಾಗಿ ಮಳೆ ಸಾಧಾರಣವಾಗಿರುತ್ತದೆ. ಸರಾಸರಿ ಮಳೆ - ೮ ರಿಂದ ೭.೫ ಮಿ.ಮಿಾ.

## ಮಳೆ :

ವರ್ಷಕ್ಕೆ ೩೪ - ೩೫ ಅಂಗುಲ ಮಳೆಯಾಗುತ್ತದೆ. ಜೂನ್ - ಸೆಪ್ಟೆಂಬರ್ ಮಧ್ಯದಲ್ಲಿ ೭೪ ಶತಾಂಶ, ಮೇ ತಿಂಗಳಿನಲ್ಲಿ ಗಾಳಿಯೊಡನೆ ಸೇರಿದ ಸ್ವಲ್ಪ ಮಳೆಯುಂಟು. ಮಾನ್ಸೂನ್ ಹೋದನಂತರ ಅಕ್ಟೋಬರ್ - ನವಂಬರಿನಲ್ಲಿ ಮುಖ್ಯವಾದ ಮಳೆಗಾಲ. ಆದರೂ ಒಂದು ಸಂವತ್ಸರ ಹೆಚ್ಚಿನ ಮಳೆಯಾದರೆ ಇನ್ನೊಂದುವರ್ಷ ಸಾಧಾರಣವಾಗಿ ಇರುವುದು.

ಈ ಪ್ರದೇಶದ ಕಣಿವೆಗಳು ವಾಸಯೋಗ್ಯವಾಗಿ ಚೆನ್ನಾಗಿವೆ. ತಿರುಪತಿಯ ದೆಟ್ಟದ ಮೇಲೆ ಹೆಚ್ಚಿಗೆ ಅನಾರೋಗ್ಯಕರವಾಗಿ, ಕೆಲವು ವರ್ಷಗಳ ಹಿಂದಿನವರೆಗೆ ಮಲೇರಿಯಾ ಜ್ವರದ ಹಾವಳಿಯ ಭಯವಿದ್ದಿತು.

ಚಿತ್ತೂರು ಮಂಡಲದಲ್ಲಿ ವಾರ್ಷಿಕ ವರ್ಷಪಾತ ಅತಿಕಡಮೆಯಿದ್ದದ್ದರಿಂದ ಇಲ್ಲಿ ಹೆಚ್ಚಿಗೆ ಅನಾವೃಷ್ಟಿ ಮೂಲವಾದ ಕ್ಷಾಮಗಳು ಸಂಭವಿಸುತ್ತಿವೆ. ನೈಋತ್ಯ ಋತುಪವನಗಳಿಗಿಂತ ಈಶಾನ್ಯ ಪವನದಿಂದಾಗಿ ಇಲ್ಲಿ ಮಳೆ ಹೆಚ್ಚು. ಪಶ್ಚಿಮದಲ್ಲಿನ ವಾಯಲ್ಪಾಡು, ಮದನಪಲ್ಲಿ, ಪುಂಗನೂರು, ಪಲಮನೇರು, ಕುಪ್ಪಂ ಪ್ರಾಂತಗಳಲ್ಲಿ ಅನಾವೃಷ್ಟಿ ಹೆಚ್ಚು. ಈಶಾನ್ಯದಲ್ಲೂ ಸಹ ಆಗಾಗ್ಗೆ ಕ್ಷಾಮ. ಬಂಗಾಳಾ ಕೊಲ್ಲಿಯಲ್ಲಿ ಮದ್ರಾಸು ಸಮಿಾಪದಲ್ಲಿ ಉಂಟಾಗುವ ಅಲ್ಪ ಪೀಡನೆಯಿಂದ, ಉಂಟಾಗುವ ಮಳೆಗಳು ಕೆಲಮಟ್ಟಿಗೆ ಸಹಾಯಕವಾಗುತ್ತವೆ.

## ಉಷ್ಣೋಗ್ರತೆ :

ವರ್ಷದಲ್ಲಿ ಉಷ್ಣೋಗ್ರತೆ ಸಾಮಾನ್ಯವಾಗಿ 18 ಡಿಗ್ರಿ ಯಿಂದ ೪೨ ಡಿಗ್ರಿ ಸೆಂಟಿಗ್ರೇಡ್‌ವರೆಗೆ ನವಂಬರ್ ಮಧ್ಯದಿಂದ ಫೆಬ್ರವರಿ ಮಧ್ಯದವರೆಗೆ ಅತಿ ಶೀತಲವಾಗಿರುತ್ತದೆ. ಡಿಸೆಂಬರಿನಲ್ಲಿನ ಅತ್ಯಧಿಕ ಉಷ್ಣ ೨೫-೩ ಸೆಂ. (೭೭.೫ ಫ್ಯಾ) ಕನಿಷ್ಠ ೧೫.೪ ಸೆಂ. (೫೯.೫ ಫ್ಯಾ) ಫೆಬ್ರವರಿಯ ನಂತರ ವಾತಾವರಣ ಬಿಸಿಯೇರುತ್ತದೆ. ಏಪ್ರಿಲ್ ಮೇ ತಿಂಗಳಿನಲ್ಲಿ ರಾತ್ರಿಗಳಲ್ಲಿ ಉಷ್ಣೋಗ್ರತೆ ತೀವ್ರ. ಮೇ ತಿಂಗಳ ಸರಾಸರಿ ೨೩ ಸೆಂಟಿಗ್ರೇಡ್. ಹಲವು ದಿನಗಳಲ್ಲಿ ಧೂಳುಗಾಳಿಗಳಿಂದ ಕೂಡಿದ ಮಳೆಯೂ ಉಂಟು. ಹಾಗಾಗಿ ಸ್ವಲ್ಪ ತಂಪೂ ಆಗುತ್ತದೆ. ಜೂನ್ ಮೊದಲವಾರದಲ್ಲಿ ನೈಋತ್ಯ ಪವನಗಳಿಂದಾಗಿ ಮಳೆ ಸಂಭವವಾಗಿ ಸ್ವಲ್ಪ ತಂಪೂ ಆಗುತ್ತದೆ. ವರ್ಷಋತು ಬೇಸಿಗೆಗಿಂತ ಅನುಕೂಲಕರವಾಗಿರುವುದು. ಅಕ್ಟೋಬರ್ ನಂತರ ರಾತ್ರಿಗಳ ಹೊತ್ತು ತಂಪಾಗಿರುತ್ತದೆ.

ಸಾಧಾರಣವಾಗಿ ಜುಲೈ ಡಿಸೆಂಬರ್‌ಗಳ ಮಧ್ಯೆ ವಾತಾವರಣದಲ್ಲಿ ೭೦ ರಿಂದ ೮೦ ಶತಾಂಶ ಆರ್ದ್ರತೆ ಬೆಳಗ್ಗೆ ಹೊತ್ತಿನಲ್ಲಿ ಹಾಗೂ ಮಧ್ಯಾಹ್ನಗಳಲ್ಲಿ ೬೦ ರಿಂದ ೭೫ ಶತಾಂಶ ಒಣಹವೆಯಿಂದ ಕೂಡಿರುವುದು. ಈ ಕಾಲದಲ್ಲಿ ತೇವಾಂಶ ೨೫ ರಿಂದ ೪೦ ಶತಾಂಶವಿರುತ್ತದೆ.

## ಮೋಡಗಳು :

ಜೂನ್ ನಿಂದ ನವಂಬರ್‌ವರೆಗೆ ಮೋಡಕವಿದ ವಾತಾವರಣ. ಹಲವು ದಿನಗಳಲ್ಲಿ ಪೂರ್ತಿ ಮೋಡಗಳು. ಮಿಕ್ಕ ದಿನಗಳಲ್ಲಿ ತಿರುಮಲೆಯ ಆಕಾಶವೆಲ್ಲ ಪೂರ್ತಿಯಾಗಿ ಶುಭ್ರವಾಗಿರುತ್ತದೆ.

ಇಲ್ಲಿನ ಗಾಳಿ ಹೆಚ್ಚು ಹಗುರವಾಗಿಯೂ, ಕೆಳ ಮಟ್ಟದಲ್ಲಿಯೂ ಸಂಚರಿಸುತ್ತದೆ. ಮೇನಿಂದ ಸೆಪ್ಟೆಂಬರ್ ವರೆಗೆ ನೈಋತ್ಯದಿಂದಲೂ ಈಶಾನ್ಯದಿಂದಲೂ ಬೀಸುತ್ತವೆ. ಅಕ್ಟೋಬರ್ ಜನವರಿಗಳ ನಡುವೆ ವಾಯುವ್ಯ, ಪೂರ್ವ ದಿಸೆಗಳಲ್ಲಿಯೂ, ಆ ನಂತರದ ಮೂರುತಿಂಗಳು ಈಶಾನ್ಯ ದಿಸೆಯಲ್ಲೂ ಉಂಟಾಗುತ್ತವೆ.

## ಭೂ ಸ್ವಭಾವ :

ಇಲ್ಲಿನ ಭೂಗರ್ಭಶಿಲಾ ಸ್ವಭಾವ ಮೂರು ವಿಧವಾಗಿ ಕಂಡುಬರುತ್ತದೆ. ಜೆವಾಡಿ ರೀತಿಯ ಶಿಲೆ ಪೂರ್ವದ ಕಣಿವೆಗಳಲ್ಲೂ ಅವುಗಳ ಹಾಸುಗಲ್ಲು ಜಾತಿಯ ಶಿಲೆಗಳು ಆಗ್ನೇಯಭಾಗದಲ್ಲಿ ಅಲ್ಲಲ್ಲಿ ಕಂಡುಬರುವುದು. ಈ ಪರ್ವತಗಳು ತಗ್ಗು ತೆವರುಗಳ ಸಣ್ಣ ಗುಡ್ಡಗಳಾಗಿ ಅಲ್ಲಲ್ಲಿ ಹೆಚ್ಚು ಬೆಳೆಯದ ಕಿರು ದೆಟ್ಟಗಳಾಗಿವೆ. ಈ ಕಲ್ಲುಗಳ ನಡುವೆ ಉತ್ತಮವಾದ ಹುಲ್ಲು ಬೆಳೆದು ಪಶುಗ್ರಾಸವಾಗುತ್ತದೆ. ಇದನ್ನು ಸಾಧಾರಣವಾಗಿ ಸುಟ್ಟು ಬಿಡುತ್ತಿದ್ದರು. ಅದು ಬೂದಿಯಾಗಿ ಮಣ್ಣಿನಲ್ಲಿ ಸೇರುತ್ತಿದ್ದು, ಮಳೆಯಾದ ನಂತರ ಮತ್ತೆ ಹಸಿರು ಹುಲ್ಲು ಮೊಳಕೆಯೊಡೆಯುತ್ತದೆ. ಹೀಗಾಗಿ ಒಣ ಹುಲ್ಲನ್ನು ಸುಡುವಾಗ ಗಿಡಗಳ ಬೆಳವಣಿಗೆಗೆ ಅಡ್ಡಿಯೊದಗಿ ಇಲ್ಲಿನ ಸಸ್ಯಗಳೆಲ್ಲ ಗಿಡ್ಡಾದ ಸಸ್ಯಗಳಾಗಿವೆ. ಅಲ್ಲಲ್ಲಿ ಮಾತ್ರ ಎತ್ತರವಾದ ಮರಗಳನ್ನು ಕಾಣಬಹುದು.

ಹಾಸುಗಲ್ಲುಗಳ ನಿಕ್ಷೇಪದೊಡನೆಯೇ ವಿಸ್ತಾರವಾದ ಅಡ್ಡಗಲ್ಲುಗಳೂ ಇಲ್ಲಿ ಕಂಡು ಬರುತ್ತವೆ. ಇಂತಹ ಅಡ್ಡವರಸೆಗಳು ಹಲವಾರು ಮೈಲಿ ಉದ್ದಕ್ಕೆ ವಿಸ್ತರಿಸಿರುವುದನ್ನು ಕಾಣಬಹುದು. ಇವೆಲ್ಲ ಪೂರ್ವ ಪಶ್ಚಿಮವಾಗಿಯೇ ವ್ಯಾಪಿಸಿದ್ದು ದೆಟ್ಟಗಳ ಮೇಲೆ ನೇರವಾಗಿ ತಲೆಯೆತ್ತಿ ನಿಂತಿವೆ. ಈ ಅಡ್ಡಗಲ್ಲುಗಳು ಬಹುಕಠಿಣವಾಗಿದ್ದು ಹಾಸುಗಲ್ಲುಗಳ ನಿರ್ಮಾಣಕ್ಕೆ ಮೂಲಾಧಾರವಾಗಿವೆ.

ಡಾ|| ಎನ್. ರಮೇಶನ್ ಆಂಧ್ರಪ್ರದೇಶದ ಸರ್ಕಾರದ ಕಾರ್ಯದರ್ಶಿಗಳಾಗಿ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾಗಿ ನಿವೃತ್ತರಾದವರು. ಶಾಸನಗಳ ಐತಿಹಾಸಿಕ ಸ್ಮಾರಕಗಳ ಅಧ್ಯಯನದಲ್ಲಿ ಆಸಕ್ತರಾಗಿ ಅನೇಕಾನೇಕ ಹೊಸಹೊಳಹುಗಳನ್ನು ಹಳೆಯ ಆಧಾರಗಳಿಂದಲೇ ಎತ್ತಿ ತೋರಿದ ಹಿರಿಯರು. ಅವರ ಮೇರು ಕೃತಿ 'ದಿ ತಿರುಮಲ ಟೆಂಪಲ್' ೧೯೮೧ ರಲ್ಲಿ ತಿ. ತಿ. ದೇವಸ್ಥಾನಗಳಿಂದ ಪ್ರಕಟವಾಗಿದೆ. ಅದರ ಅನುವಾದ ಕನ್ನಡದಲ್ಲಿ ಧಾರಾವಾಹಿಯಾಗಲಿದೆ.



ಇಲ್ಲಿನ ಶಿಲಾಭಾಗದಲ್ಲಿ ನೊರಜುಕಲ್ಲುಗಳು, ಮರಳುಗಲ್ಲುಗಳು ಬೆರೆತು ಸಿಡಿಗಲ್ಲುಗಳಾಗಿರುವುದನ್ನು ಕಾಣಬಹುದು. ಇವುಗಳಲ್ಲಿ ಸುಣ್ಣದ ಕಲ್ಲು, ಲಾವಾ ಜಾತಿಗೆ ಸೇರಿದ ಕಲ್ಲುಗಳನ್ನೂ ನೋಡಬಹುದು. ತಿರುಪತಿ ದೆಟ್ಟಗಳ ದಕ್ಷಿಣ ಪಾದಭೂಮಿಯಲ್ಲಿ ನಗರಿ ದೆಟ್ಟಗಳಲ್ಲಿ ಯಂತೆಯೇ ಅತಿ ವಿಶಾಲವಾದ, ತುಸು ಮೃದುವಾದ ಮರಳುಗಲ್ಲುಗಳು ನೂರಾರು ಅಡಿ ಮಂದವಾಗಿ ವಾಯುವ್ಯ ದಿಕ್ಕಿನಲ್ಲಿ ಎರಡು ಮೂರು ಮೈಲಿಗಳವರೆಗೆ ವ್ಯಾಪಿಸಿದೆ. ಇದು ಸಾಧಾರಣವಾಗಿ ಕಲ್ಲಿದ್ದಲ ಗಣಿಗಳ ಪ್ರಾಂತದ ಕಲ್ಲುಗಳನ್ನು ಹೋಲಿರುತ್ತವೆ.

ಇವುಗಳ ಜೊತೆಗೇ ಕಾಳಹಸ್ತಿ ಪ್ರದೇಶದಲ್ಲಿ ಹಲವು latavite ಹಾಸುಗಲ್ಲುಗಳನ್ನು ಕಾಣಬಹುದು. ಈ ಪ್ರದೇಶ ಸಮುದ್ರ ತೀರದಿಂದ ಹತ್ತಿರವಾಗಿದ್ದು, ಇಲ್ಲಿನ ಭೂಗರ್ಭ ಸ್ವಭಾವ ಮದರಾಸಿನದರಂತೆಯೇ. ನೆಲ ಕೆಂಪುಮಣ್ಣಿನಿಂದ ಕೂಡಿದ್ದು ಮರಳು ಸಹ ಕಂಡುಬರುವುದು. ಈ ಭಾಗದಲ್ಲಿನ ಹಾಸುಗಲ್ಲುಗಳು ನೀರ ಪೆಟ್ಟು ತಿಂದು, ನುಣುಪನ್ನು ಹೊಂದಿವೆ. ನಗರಿಯ ಬಳಿಯಲ್ಲಿನ ಹಾಸುಗಲ್ಲುಗಳು ವಿಶಾಲವಾಗಿಯೂ, ಅಸಂಖ್ಯಾತವಾಗಿಯೂ ಇದ್ದರೂ, ಹೋಗಹೋಗುತ್ತ ಅವುಗಳ ಗಾತ್ರ, ಸಂಖ್ಯೆ ತಗ್ಗುತ್ತ ತೀರಪ್ರಾಂತವನ್ನು ಸೇರುವಲ್ಲಿ ಕೇವಲ ನೊರಜು ಕಲ್ಲುಗಳಂತೆ ಸಣ್ಣ ಸಣ್ಣ ಗುಡ್ಡಗಳಾಗಿವೆ. ಭೂಮಿಯ ಮೇಲ್ಭಾಗವನ್ನು ಅಗೆದಾಗ ಮೊದಲಿಗೆ ಮೃದುವಾಗಿದ್ದರೂ ಗಾಳಿಯು ಸೋಕಿದ ನಂತರ ಗಟ್ಟಿಯಾಗುತ್ತದೆ. ಇದರಿಂದಾಗಿ ಕೆರೆ ಕಟ್ಟೆಗಳು, ಬಾವಿಯ ಅಂಚುಗಳು, ಗೃಹ ನಿರ್ಮಾಣದಲ್ಲಿ, ಹೊಲಗದ್ದೆಗಳ ಬದುವಿನಲ್ಲಿ ಉತ್ತಮ ಸಾಮಗ್ರಿಯಾಗುತ್ತದೆ.

ತಿರುಮಲೆಯ ಆಲಯದ ಬಗ್ಗೆ ಹಲವಾರು ಪುಸ್ತಕಗಳು ಪ್ರಕಟವಾಗಿವೆ. ಸರ್ವಶ್ರೀ ಡಾ|| ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಟಿ.ಕೆ.ಟಿ. ವೀರರಾಘವಾಚಾರ್ಯ, ಸಾಧುಸುಬ್ರಹ್ಮಣ್ಯ ಶಾಸ್ತ್ರಿ, ವಿ. ಶ್ರೀನಿವಾಸರಾವ್, ವಿ. ಎಂ. ನರಸಿಂಹನ್, ಎಂ. ರಾಮರಾವ್, ಪಿ. ಸೀತಾಪತಿ - ಅವರುಗಳ ಪುಸ್ತಕಗಳನ್ನಿಲ್ಲಿ ನೆನಪಿಸಬಹುದು. ದಿ ತಿರುಮಲ ಟೆಂಪಲ್ ಅವುಗಳಲ್ಲಿ ಈಚಿನದೂ, ಒಳಗೊಂಡದ್ದೂ, ಅರಿವಿನ ದಿಗಂತವನ್ನು ಆಚೆಗೆ ನೂಕುವಂತಹದೂ ಆಗಿದೆ.

ಕನ್ನಡದಲ್ಲಿಯೂ ತಿರುಮಲೆಯಪ್ಪನ ದೇವಾಲಯವನ್ನು ಕುರಿತ ಕೃತಿಗಳು ಹಲವಾರು. ಸರ್ವಶ್ರೀ ಶ್ರೀನಿವಾಸರಾವ್ ಕೊರಟಿ, ಆದ್ಯರಾಮಾಚಾರ್ಯ ಮೊದಲಾದವರ ಈಚಿನ ಪ್ರಯತ್ನಗಳೊಂದಿಗೆ, ಮುಖ್ಯವಾಗಿ ಒಂದೇ ವಿಷಯದಬಗ್ಗೆ ಮತ್ತೆ ಮತ್ತೆ ಬರೆದ ಪ್ರೊ|| ಎಸ್. ಕೆ. ರಾಮಚಂದ್ರರಾಯರ ಪ್ರಯತ್ನಗಳು ಪ್ರಶಂಸಾರ್ಹ. ಶ್ರೀ ರಾಮಚಂದ್ರ ರಾಯರ ತಿರುಪತಿ ತಿಮ್ಮಪ್ಪ ಕೃತಿ ಕರ್ನಾಟಕ ಸಾಹಿತ್ಯ ಅಕಾಡಮಿಯ ಪ್ರಶಸ್ತಿಯನ್ನೂ ಪಡೆದಿದೆ. (ಅವರು ಆಂಗ್ಲಭಾಷೆಯಲ್ಲೂ ಹೊಸಹೊಸ ವರ್ಣಚಿತ್ರಗಳೊಡನೆ ತಿರುಮಲೆಯ ಬಗ್ಗೆ ಬರೆದಿದ್ದಾರೆ ಎಂಬುದು ಅವರ ತೀರದ ಭಕ್ತಿಗೆ, ವಿದ್ವತ್ತಿಗೆ, ದ್ಯೋತಕವಾಗುತ್ತದೆ) ಇಲ್ಲಿನ ಅನುವಾದ ಕನ್ನಡದ ಜನತೆಗೆ ಪ್ರಿಯವಾಗುತ್ತದೆ ಎಂದು ಆಶಿಸಲಾಗಿದೆ. -ಸಂ||

ತಿರುಮಲೆಯ ಬೆಟ್ಟವನ್ನೇರುವ ಯಾತ್ರಿಕರು ಅನೇಕ ಕಡೆ, ಬೃಹತ್ ದೆಣಚುಗಲ್ಲುಗಳು ಕಾಲಾಂತರದಲ್ಲಿ ಕರಗಿ ಗೋಡೆಗಳಿಂತಾಗಿರುವುದರಿಂದಾಗಿರುವ ಅತಿಸುಂದರ ದೃಶ್ಯಗಳನ್ನು ವೀಕ್ಷಿಸುವರು. ಈ ಬೃಹತ್ ಶಿಲಾಖಂಡಗಳು ತುಸು ಮಸಕು ಬಣ್ಣದವಾಗಿ, ಸೀಳುಸೀಳಾಗಿ, ಅತಿ ಮಂದವಾದ ಹಾಸುಗಳಂತೆ ಕಂಡುಬರುತ್ತವೆ. ಬಹುತೇಕ ಎಲ್ಲ ಶಿಲಾಖಂಡಗಳೂ, ಕೆಮ್ಮಣ್ಣು ಅಥವಾ ಮಸಕು ಕಿತ್ತಳೆ ವರ್ಣದವು. ಮುಖ್ಯ ಗಿರಿಪಂಕ್ತಿ ದಕ್ಷಿಣದತ್ತ ಮುಖ ಮಾಡಿದ್ದು ಅಲ್ಲಲ್ಲಿ ಗೋಡೆಯಂತೆ ನಿಂತಿರುವುದನ್ನು ಕಾಣುವೆವು.

ನಗರಿ ದೆಣಚುಗಲ್ಲುಗಳ ಮೇಲ್ಮೈ ಲಕ್ಷಣಗಳನ್ನುಳ್ಳ ದೆಣಚುಗಲ್ಲು ಪದರುಗಲ್ಲುಗಳಿಂದಲೇ ತಿರುಮಲೆಯ ಪರ್ವತಗಳ ಗಪ್ಪು ಶಿಲೆಗಳು ರೂಪತಾಳಿವೆ. ತಿರುಮಲೆಯ ದಕ್ಷಿಣ ಪಶ್ಚಿಮಗಳ ಮುಖ್ಯ ಅಮುಖ್ಯ ಗಿರಿಪಂಕ್ತಿಗಳ ಕಲ್ಲುಗಳು ಹಾಗೂ ತಿರುಮಲೆಯ ದಕ್ಷಿಣ ಹಾಗೂ ಪಶ್ಚಿಮದ ತಳಭಾಗದಲ್ಲೂ ಪದರುಗಲ್ಲುಗಳ ಮೇಲೆ ಈ ದೆಣಚುಕಲ್ಲುಗಳು ನಿಂತಿವೆ. ಈ ನಗರಿ ದೆಣಚುಕಲ್ಲುಗಳು ಕಡಪ ತಳಹದಿಯೆಂದು ಹೆಸರಾಗಿ ಪಶ್ಚಿಮದಲ್ಲಿ ದ್ರೋಣಾಚಲದವರೆಗೆ ಉತ್ತರದಲ್ಲಿ ಶ್ರೀಶೈಲದಾಚೆಯವರೆಗೆ, ಪೂರ್ವದಲ್ಲಿ ಜಗ್ಗಯ್ಯಪೇಟ, ವಿನುಕೊಂಡ, ಉದಯಗಿರಿ, ವೆಂಕಟಗಿರಿಗಳವರೆಗೂ ಹರಡಿರುವ ಅರ್ಧವೃತ್ತಾಕಾರದ ಪರ್ವತಪ್ರದೇಶದ ಭಾಗವಾಗಿದೆ. ಡೋಲಮೈಟ್, ಗ್ರಾನೈಟ್‌ಗಳ ತಳಪಾಯದ ಮೇಲಿರುವ ಈ ಭಾಗ ೨೫೦೦ ಮಿಲಿಯ ವರ್ಷಗಳಷ್ಟು ಹಳೆಯದು. ಕಡಪ ತಳದ ಪ್ರಾಚೀನತೆ ೧೭೦೦ ಮಿಲಿಯ ವರ್ಷಗಳಾದರೆ ನಗರಿ ದೆಣಚುಗಲ್ಲು ತಳ ೧೫೦೦ ಮಿಲಿಯ ವರ್ಷಗಳಷ್ಟು ಹಳೆಯದಾಗಿ ತಳದ್ದು ಮೇಲಿನ ಗಪ್ಪು ಶಿಲೆಗೂ ನಡುವಣ ಕಾಲ ವ್ಯತ್ಯಾಸದಿಂದಾಗಿ ಇದನ್ನು ಅಪಾರ್ಚಿಯನ್ ಅನ್‌ಕನ್‌ಫರ್ಮಿಟಿ ಎಂದು ಗುರುತಿಸಲಾಗಿದೆ. ತಿರುಮಲೆಯ ಗಪ್ಪು ಶಿಲೆಯ ಒಂದು ಭಾಗವನ್ನು ರಾಷ್ಟ್ರೀಯ ಭೌಗೋಳಿಕ ಸ್ಮಾರಕವೆಂದು ಗುರುತಿಸುವ ಮೂಲಕ ಭಾರತದ ರಾಷ್ಟ್ರೀಯ ಭೌಗೋಳಿಕ ಸರ್ವೆಯವರು ಈ ಅಂಶವನ್ನು ಅವಧಾರಿಸಿದ್ದಾರೆ. ಹೊಸ ಘಟ್ಟದ ರಸ್ತೆಯಲ್ಲಿ ೧೮ ನೇ ಕಿ. ಮೀ. ಬಳಿ ಘಟ್ಟದ ಶಿರವನ್ನು ಮುಟ್ಟುವ ಸ್ಥಳದಲ್ಲಿ ಈ ಕೇಂದ್ರವಿದೆ.

ನಗರಿ ದೆಣಚುಗಲ್ಲಿನ ಆರಂಭ ತಿರುಮಲೆಯ ಪರ್ವತದಲ್ಲಿ ಉಂಟಾಗಿ ಪೂರ್ವಕ್ಕೆ ಸರಿದು ಕಪಿಲತೀರ್ಥದ ಬಳಿ ನೆಲಮಟ್ಟವನ್ನು ಸೇರಿ ಇನ್ನೂ ಮುಂದೆ ಭೂಗರ್ಭವನ್ನು ಸೇರುತ್ತದೆ.

ನಗರಿ ದೆಣಚುಗಲ್ಲುಗಳು, ಪದರುಗಲ್ಲುಗಳು, ಹಾಸುಗಲ್ಲುಗಳು ಹೆಚ್ಚು ಕಡಮೆ ನೇರವಾದ ಸಾಲಿನಲ್ಲಿ ಹಲವಾರು ಕೊರಕಲುಗಳನ್ನುಂಟುಮಾಡಿವೆ. ಇಂತಹ ಒಂದು ಕೊರಕಲು ತಿರುಮಲೆಯ ಆಲಯದ ಪ್ರಾಂತದಲ್ಲಿದ್ದರೆ ಮತ್ತೊಂದು ಅವಚಾರಿ ದೆಟ್ಟದಲ್ಲಿದೆ. ಮತ್ತೊಂದು ತಿರುಪತಿಯ ಉತ್ತರಕ್ಕೆ ಮುಂದುವರಿದು ಕರಕಂಬಾಡಿ ಏರ್ಪೇಡುಗಳತ್ತ ನಡೆಯುತ್ತದೆ. ಕೊರಕಲುಗಳು ಸಾಮಾನ್ಯವಾಗಿ ಜಲಸಂಚಾರಕ್ಕೆ ಅವಕಾಶ ಮಾಡಿಕೊಡುತ್ತವೆ. ತಿರುಮಲೆಯ ಕೊರಕಲು ತಿರುಪತಿ ತಿರುಮಲೆಗಳಲ್ಲಿನ ನೀರಿನ ಸಂಗ್ರಹಕ್ಕೆ ಅವಕಾಶ ಮಾಡಿಕೊಟ್ಟಿದೆ.

ನಗರಿ, ನಾರಾಯಣ ವನಗಳ ಬೆಟ್ಟಗಳ ಮೇಲುಭಾಗವೂ, ಎಂದರೆ ಕಾಳಹಸ್ತಿ ಪುತ್ತೂರುಗಳ ನಡುವೆಯಿರುವ ಸ್ವರ್ಣಮುಖಿ ಅರಣಿ ನದಿಗಳ ನಡುಭಾಗವೂ ನಗರಿ ದೆಣಚುಗಲ್ಲಿನಿಂದಲೇ ಕೂಡಿದ್ದು ದೆಟ್ಟಗಳ ತಳಭಾಗ ಪದರುಗಲ್ಲುಗಳಿಂದ ಕೂಡಿದೆ.

ಕಡಪ ತಳದ ಸೀಮೆಗಳು ತಿರುಮಲೆ - ತಿರುಪತಿಗಳ ದಕ್ಷಿಣಕ್ಕೆ ಗಣನೀಯವಾಗಿ ವಿಸ್ತರಿಸಿದ್ದು ನಗರಿ ನಾರಾಯಣವನಗಳಲ್ಲಿನ ಬೆಟ್ಟಗಳು ಕೊರಕಲಿಗೂ ಸವೆತಕ್ಕೂ ಈಡಾಗಿವೆ.

ತಿರುಮಲೆಯ ಪರ್ವತಾವಳಿ ನೆಮ್ಮಿನಿಂತ ಮಲೆಗಳಾದರೆ ಪದರುಗಲ್ಲುಗಳು ಹಾಸುಗಲ್ಲುಗಳು ಒಟ್ಟಿಗೆ ಗುಡ್ಡಗಳಾಗಿ ವಿಸ್ತರಿಸಿವೆ. ಕಾರಣ ಇಲ್ಲಿನ ಶಿಲೆಗಳಲ್ಲಿನ ವ್ಯತ್ಯಾಸ. ದೆಣಚುಗಲ್ಲುಗಳು ಜಾರು ಜಾರಾಗಿ, ನಿಲುವು ಜೋಡಣೆಯಿಂದಾಗಿ ಶಿಖರಗಳ ನಿರ್ಮಾಣವಾಗಿವೆ. ಪದರಗಲ್ಲು ದೆಣಚುಗಲ್ಲಿಗಿಂತ ದೇಗ ಜೀರ್ಣವಾಗುವ ಗುಣ ಹೊದಿರುವುದರಿಂದ ಹೀಗೆ ಆಗಿದೆ. ಅನೇಕ ಕಡೆ ಪದರುಗಲ್ಲುಗಳಿಗೆ ದೆಣಚುಗಲ್ಲು ರಕ್ಷಣೆ ಕವಚವಾಗಿದೆ.

ತಿರುಮಲೆಯ ಆಲಯದ ಉತ್ತರ ಭಾಗದಲ್ಲಿ ನಗರಿ ದೆಣಚುಗಲ್ಲು ಪ್ರಾಕೃತಿಕ ಜೀರ್ಣತೆಗೆ ಒಳಗಾಗಿ ಒಂದು ಸಹಜ ಶಿಲಾ ತೋರಣವನ್ನುಂಟಾಗಿಸಿದೆ. ಇದು ಸ್ವಾಮಿ ಆಲಯಕ್ಕೆ ಪ್ರಕೃತಿ ನೀಡಿದ ಕೊಡುಗೆ. ಶ್ರೀ ಸಾಮಾನ್ಯನಿಗೆ ಆಸಕ್ತಿಕರ ಅಂಶವಾಗಿ ವಿಜ್ಞಾನಿಗೆ ಪ್ರಮುಖವಾದ ಅಂಶವಾಗಿದೆ. ಹೀಗಾಗಿ ಈ ಅಪರೂಪದ ಕೊಡುಗೆಯನ್ನು ರಾಷ್ಟ್ರೀಯ ಸ್ಮಾರಕವಾಗಿ ಕಾಯ್ದುಕೊಳ್ಳದೇಕು.

ತಿರುಮಲೆಯ ಪೂರ್ವದಲ್ಲಿ ಜೀರ್ಣವಾದ ಶಿಲೆಗಳಿಂದಾಗಿ ನೇರವಾದ ಕೊರಕಲು ಗಳುಂಟಾಗಿದ್ದರೆ ತಿರುಮಲೆಯ ಪಶ್ಚಿಮಕ್ಕೆ ತುಸುವೆ ಜಾರಿದ ಕೊರಕಲುಗಳಾಗಿವೆ.

## ಖನಿಜ ಸಂಪತ್ತು :

ಇಲ್ಲಿನ ಪದರುಗಲ್ಲುಗಳಲ್ಲಿ ಧಾರವಾಡದ ಕಾಲಕ್ಕೆ ಸಂಬಂಧಿಸಿದ ಕಬ್ಬಿಣದ ಅದಿರು ದೊರೆಯುವುದು. ಕೆಲಕಡೆ ನಿರ್ಯಾತವೂ ಆಗುವುದಾದರೂ ಅದರಲ್ಲಿನ ಕಬ್ಬಿಣದ ಅಂಶ ಅರವತ್ತು ಶತಾಂಶಕ್ಕೂ ಕಡಮೆ ಹಾಗೂ ಗುಣಮಟ್ಟವು ಕೆಳಸ್ತರದ್ದು. ಚಿನ್ನ ಸೀಸ ಹಲವೆಡೆಗಳಲ್ಲಿ ಅತಿ ಕಡಮೆ ಪ್ರಮಾಣದಲ್ಲಿ ದೊರೆಯುವುದು. ಜಮೀನ್ದಾರರ ಕಾಲದ ಗಣಿಗಳನ್ನು ಮುಚ್ಚಿ ಬಹುಕಾಲವಾಗಿದೆ.

## ಸಸ್ಯಸಂಪತ್ತು :

ಒಂದು ಪ್ರದೇಶದ ಇಡೀ ಅಭಿವೃದ್ಧಿಯ ಸಾಮಾನ್ಯ ಸ್ವರೂಪವನ್ನು ಗುರುತಿಸಲು ಅಲ್ಲಿನ ಸಸ್ಯಸಂಪತ್ತು ಅಳತೆಗೋಲಾದರೂ, ಅಲ್ಲಿನ ಜೈವಿಕ ಚಟುವಟಿಕೆಯಿಂದ ಪರಿಸರದ ಯಶಸ್ಸು - ಬಹುತೇಕ ಕುಂಠಿತವಾಗುತ್ತದೆ. ಜೈವಿಕ ಚಟುವಟಿಕೆ ಇಡೀ ಜಿಲ್ಲೆಯಲ್ಲಿ ಅತಿ ಸಾಂದ್ರವಾಗಿದ್ದರೂ, ಇಲ್ಲಿ ಸಸ್ಯಶಾಸ್ತ್ರ ಸಂಶೋಧಕನಿಗೆ ವಿಶಿಷ್ಟವಾದ ಸಸ್ಯರಾಜಿ ದೊರೆಯುತ್ತದೆ. ವಾತಾವರಣ, ಮೇಲ್ಮೈ ಲಕ್ಷಣ, ಭೂಸಾರಗಳು ಈ ಪ್ರಾಂತ್ಯದ ಸಸ್ಯ ವರ್ಗವನ್ನು ಪ್ರಭಾವಿಸಿವೆ. ಹವಾಗುಣ ಇಡಿಯಾಗಿ ಅನುಕೂಲಕರವಾದದ್ದು.

ಸಿಂಹಾಚಲ ಹಾಗೂ ತಿರುಪತಿಗಳಲ್ಲಿನ ಪದರಗಲ್ಲುಗಳ ಪರ್ವತಾವಳಿ ಬಹುತೇಕ ತಮ್ಮೊಡನೆ ಕೆಂಪು ಮೆಕ್ಕಲು ಮಣ್ಣನ್ನು ಅದರೊಡನೆಯೇ ಸೇರಿದ ಕಾಡುಗಳನ್ನೂ ಎತ್ತರವಾದ ಮೈದಾನಗಳನ್ನೂ ಒಣ ಎಲೆಗಳ ಮರಗಳನ್ನೂ ಹೊಂದಿವೆ. ಚಾಮಲ, ಮಾಮಂಡೂರು, ತಲಕೋನ ಕಣಿವೆಗಳಲ್ಲಿ ಮಣ್ಣಿನ ಅಳತೆ ಹೆಚ್ಚಾಗಿದ್ದು, ಶುಷ್ಕ ನಿತ್ಯಹರಿದ್ವರ್ಣದ ಸಸ್ಯಗಳು ದೆಳೆಯುತ್ತವೆ. ಶಿಲಾ ಸಂಧಿಗಳಲ್ಲಿ ಅರಳಿ ಜಾತಿಯ ಸಸ್ಯಗಳೂ ಎಪಿಫೈಟಿಕ್ ಸಸ್ಯಗಳೂ ಕಂಡುಬರುತ್ತವೆ. ಕಲ್ಲು ಒಡೆದು ಜೀರ್ಣವಾಗುವುದರಲ್ಲಿ ಈ ಸಸ್ಯಗಳ ಪಾತ್ರ ಹಿರಿದು.

ಮಿಕ್ಕಂತೆ ಪರ್ವತ ಪ್ರದೇಶಗಳ ಹೊರತಾದ ಪ್ರದೇಶ, ಕಾಯ್ದಿಟ್ಟ ಕಾಡುಗಳು ಶುಷ್ಕ ಕುರುಚಲು ತರುಗಳ ಬೀಡುಗಳಾಗಿದೆ. ಇದು ಪಶ್ಚಿಮದ ಎತ್ತರ ಪ್ರದೇಶದಲ್ಲಿ ಮುಖ್ಯವಾಗುತ್ತದೆ. ನಡುನಡುವೆ ಕಲ್ಯಾಣಿ, ಸ್ವರ್ಣಮುಖಿ, ಕುಶಸ್ಥಲಿ, ಪಾಲಾರ್ ಮೊದಲಾದ ನದಿಗಳನ್ನು ಸೇರುವ ಹಲವಾರು ಹೊಳೆಗಳಿಂದಾದ ತಗ್ಗು ತೆವರುಗಳನ್ನು ಕಾಣಲಿಕ್ಕುಂಟು. ಅನೇಕ ಕಡೆ ಈ ಹೊಳೆಗಳಿಗೆ ಅಡ್ಡಕಟ್ಟಿ ಕೆರೆಗಳನ್ನಾನಿಸಿ ಭತ್ತ ಮೊದಲಾದ ದೆಳೆ ತೆಗೆಯುವರು. ಈ ತೇವದ ಭೂಮಿಯ ಬಳಿ

ಯಲ್ಲಿ ಹಲವು ರೀತಿಯ ಕಾಡು ಜಾಲಿಯ ತರುಗಳೂ ಮಾವಿನ ಮರಗಳೂ ಉಂಟು. ಈ ಹೊಳೆಯ ದಡಗಳಲ್ಲಿ ಹುಲ್ಲೂ ಹಸನಾಗಿ ಬೆಳೆದಿರುವುದನ್ನು ಕಾಣಬಹುದು. ಜಿಲ್ಲೆಯಲ್ಲಿ ಹುಣಿಸೆಯ ಮರಗಳು ಹೆಚ್ಚಾಗಿದ್ದರೂ ಈಗೀಗ ಅವುಗಳನ್ನು ವಿವಿಧ ಕಾರಣಗಳಿಂದಾಗಿ ಕಡಿಯಲಾಗುತ್ತಿದೆಯಾಗಿ, ಕಡಮೆಯಾಗುತ್ತಿವೆ.

## ಕಾಡುಗಳು :

ತಿರುಮಲೆಯಿರುವ ಚಿತ್ತೂರು ಜಿಲ್ಲೆಯಲ್ಲಿನ ಒಟ್ಟು ೨೭.೪ ಶತಾಂಶ ಕಾಡುಗಳಾಗಿವೆ. ಹಿಂದಿನ ಒಂದು ದಶಕದಿಂದ ಸರಕಾರ ಇಲ್ಲಿನ ಅರಣ್ಯವನ್ನು ಬೆಳೆಸಲೆಂದು ಖಾಸಗೀ ಜಮೀನುಗಳನ್ನು ಪರಿಹಾರ ನೀಡಿ ಪಡೆಯುತ್ತಿದೆ. (ತಿ. ತಿ. ದೇವಸ್ಥಾನಗಳು ತಿರುಮಲೆಯ ಅರಣ್ಯವನ್ನು ಹೆಚ್ಚಿಸಲು ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆಯನ್ನು ೧೯೮೩ ರಲ್ಲಿ ಆರಂಭಿಸಿ ಹಂತ ಹಂತವಾಗಿ ಬೆಟ್ಟದ ಮೇಲಿನ ವಾತಾವರಣ, ಅರಣ್ಯಾಚ್ಛಾದನೆಯನ್ನು ಅಭಿವೃದ್ಧಿ ಪಡಿಸುತ್ತಿದೆ. - ಬಿ. ಎನ್. ಎಸ್.)

ಇಲ್ಲಿನ ಕಾಡುಗಳಲ್ಲಿನ ಸಸ್ಯಗಳು ಶುಷ್ಕ ಸಸ್ಯಗಳು ಕಾಡು ಜಾಲಿಗಳಿಂದ ಕೂಡಿದ್ದು ಅಲ್ಲಲ್ಲಿ ಶುಷ್ಕ ಹರಿತ್ತೂ ಕಂಡಬಂದು ವಾತಾವರಣದ ಬೆಳವಣಿಗೆಯ ಎತ್ತರವನ್ನು ತಲುಪಿದಂತೆ ಕಂಡುಬರುತ್ತವೆ. ಭಾಕರಾಪೇಟ ತಿರುಮಲೆಗಳ ನಡುವಣ ಕಾಡುಗಳು ರಾಮಾಯಣ ಕಾಲದಲ್ಲಿ ದಂದಕಾರಣ್ಯಕ್ಕೆ ಸೇರಿದ ಪ್ರದೇಶಗಳಾಗಿದ್ದವು ಎಂಬುದು ಪುರಾಣ ವಚನ. ದಂಡಕಾರಣ್ಯ ಹೆಸರೇ ಸೂಚಿಸುವಂತೆ ಪುಗಲಸಾಧ್ಯವಾದ ಹಲವು ಹನ್ನೊಂದು ರೀತಿಯ ಜಾತಿಯ ಪಕ್ಷಿ ಪ್ರಾಣಿಗಳಿಂದ ಕೂಡಿ ವೈವಿಧ್ಯಮಯವಾದ ವನರಾಜಿಯಿಂದ ಕೂಡಿದ್ದದ್ದು. ಅಂತಹ ಅರಣ್ಯಗಳು ಇಂದು ಸುಲಭವಾಗಿ ನಿರ್ಮಾಣವಾಗಲು ಸಾಧ್ಯವಿಲ್ಲದಷ್ಟು ನಾಶವಾಗಿದ್ದು, ಬೋಳು ಗುಡ್ಡಗಳ ಬಂಜರು ಭೂಮಿಯಾಗಿಬಿಟ್ಟಿವೆ.

ವನಸಿರಿಯ ವೈವಿಧ್ಯವನ್ನು ವೈಶಾಲ್ಯವನ್ನು ಪ್ರಭಾವಗೊಳಿಸುವ ಪ್ರಧಾನ ಪ್ರಾಕೃತಿಕ ಅಂಶವೆಂದರೆ ಜೈವಿಕ ಚಟುವಟಿಕೆಯೂ ಕೂಡಿದಂತೆ ಆದ ಸ್ಥಳೀಯ ಗುಣಗಣ. ಈ ಪ್ರಾಂತ್ಯದ ಅರಣ್ಯಗಳು ಸಮುದ್ರ ಮಟ್ಟದ ಎತ್ತರದಲ್ಲಿ ಗಣನೀಯ ವೈವಿಧ್ಯವನ್ನು ಹೊಂದಿದ್ದು ಈ ತಗ್ಗು ತೆವರುಗಳು ಮಣ್ಣಿನ ತೇವಾಂಶವನ್ನು ಹವಾಗುಣವನ್ನು ಆ ಮೂಲಕವಾಗಿಯೇ ಗಿಡಗಳ ಬೆಳವಣಿಗೆಯನ್ನು ಕೆಲಮಟ್ಟಿಗಾದರೂ ಪ್ರಭಾವಿಸುತ್ತವೆ. ಜೈವಿಕ ಚಟುವಟಿಕೆಗಳು ಬೆಂಕಿ, ಕಾಡುಗಳ್ಳತನ, ಬೇಸಾಯ, ಪಶುಪಾಲನೆಗಳಲ್ಲಿ ಪ್ರತೀತವಾಗುತ್ತವೆ. ಪದೇ ಪದೇ ಉಂಟಾಗುವ ಕಾಳ್ಗಿಚ್ಚಿನ ತೀವ್ರತೆ ಇಲ್ಲಿನ ಎತ್ತರದೊಡನೆ ನೇರ ಸಂಬಂಧ ಹೊಂದಿರುವಂತೆಯೇ, ವನಾಚ್ಛಾದನೆಯ ಸಾಂದ್ರತೆಯನ್ನೂ ನೇರವಾಗಿ ಪ್ರಭಾವಿಸುತ್ತದೆ. ಆದರೆ ಶಿಖರವಹ್ನಿ ಇಲ್ಲಿ ಬಹುತೇಕ ಕಂಡುಬಂದಿಲ್ಲವಾಗಿ, ನಾಶವಾಗುವುದೆಲ್ಲ ಪಾರ್ಶ್ವ ಅರಣ್ಯಾಚ್ಛಾದನೆಯೇ.

ಪ್ರಸ್ಥಭೂಮಿಯ ಕಾಡುಗಳು ಬಹುಮಟ್ಟಿಗೆ ತಿರುಮಲೆಯ ಎತ್ತರವಾದ ಪ್ರದೇಶಕ್ಕೆ, ಭಾಕರಾಪೇಟೆಯ ಶೇಷಾಚಲ ಪರ್ವತಾವಳಿಗೆ ಪರಿಮಿತವಾಗಿವೆ. ಈ ಪ್ರಾಂತ್ಯದ ವಿಶಿಷ್ಟವಾದ ಅರಣ್ಯದಲ್ಲಿನ ಬೆಳೆಯ ೮೦ ಶತಾಂಶ ಎಂಜಿನಿಯ ಅಲ್ಬಿನ್ಫಿಲಿಯಾ ಆಗಿದೆ. ಫೋರಿಯ ತಂಬಗಿಯ ಸಸ್ಯಗಳು ವಾಸ್ತವವಾಗಿ ಗುಡ್ಡಗಳಿಗೂ, ಕೊರಕಲುಗಳಿಗೂ ಸೀಮಿತ. ಹೆಚ್ಚಿನ ತೇವಾಂಶವಿರುವಲ್ಲಿ ಷೋರಿಯಾ ತಲೂರ ಸಸಿಗಳು ಕಂಡುಬರುತ್ತವೆ. ಇವುಗಳ ಜೊತೆಗೆ ಟರ್ಮಿನಾಲಿಯ ಪಾಲಿಡೆ, ಬುಕನಾನಿಯ ಲಾಟಿಫೋಲಿಯಾಗಳೂ ಉಂಟು.

ತಿರುಪತಿ ಹಾಗೂ ಭಾಕರಾಪೇಟೆಯ ಕಾಡುಗಳು ಪರಿರಕ್ಷಿತವೆಂದು ಘೋಷಿತವಾಗುವ ಮೊದಲೇ, ಪ್ರಾಣಿ ಪಕ್ಷಿಗಳ ಗಿಡ ಮರಗಳ ವೈವಿಧ್ಯಕ್ಕೂ, ಸಮೃದ್ಧಿಗೂ ಹೆಸರು ಪಡೆದಿದ್ದವು. ಹಲವು ಜಾತಿಯ ಹಕ್ಕಿಗಳು, ಪ್ರಾಣಿಗಳು ಈ ಸ್ಥಳ ಸುರಕ್ಷಿತವೆಂದು ಕಂಡುಕೊಂಡು, ಸುಖದಿಂದ ಯಾವುದೇ ಅಡ್ಡಿ ಆತಂಕಗಳಿಲ್ಲದೆ ಜೀವಿಸಿದ್ದವು. ೨೭-೮-೧೭೫೨ ರಲ್ಲಿ ಈ ಪ್ರದೇಶದಲ್ಲಿ ಹಾದು ಹೋದ ಫ್ರೆಂಚ್ ಯಾತ್ರಿಕನೂ ರತ್ನಪಡಿ ವ್ಯಾಪಾರಿಯೂ ಆದ ಟ್ರಾವರ್ನೀರನು ತನ್ನ ಯಾತ್ರಾ ದಿನಚರಿಯಲ್ಲಿ "ಈ ಪ್ರದೇಶ ಸುಖದಾಯಿಯಾಗಿದ್ದು, ಇಲ್ಲಿನ ಅಸಂಖ್ಯಾತ ಹೊಳೆಗಳು ಚೆಲುಮೆಗಳಿಂದಾಗಿ ತಂಪಾಗಿದೆ" ಎಂದು ದಾಖಲಿಸಿ, ಮೇಜರ್ ಜುಮ್ಲಾನ ಸೈನ್ಯದಿಂದ ಆಗ ಇಲ್ಲಿ ಆನೆಗಳನ್ನು ಹಿಡಿಯುವ ಕಾರ್ಯಕ್ರಮ ನಡೆದಿದ್ದಿತು ಎಂದು ತಿಳಿಸಿದ್ದಾನೆ. ಇಂದಿನ ಇಲ್ಲಿನ ಕಾಡುಗಳ ಪರಿಸ್ಥಿತಿಯನ್ನು ಕಂಡವರಿಗೆ ಈ ಮಾತುಗಳನ್ನು ನಂಬಲು ಕಷ್ಟಸಾಧ್ಯ ಆಗಬಹುದಾದರೂ, ಕಳೆದ ಮೂರು ಶತಮಾನಗಳಿಂದ ಮನುಷ್ಯ ಕಾಡುಗಳ ವಿನಾಶದಲ್ಲಿ ಮಾಡಿರುವ ಭೀಭತ್ಸವನ್ನು ನಾವು ಚಿತ್ರಿಸಿಕೊಳ್ಳುವುದು ಸಾಧ್ಯವಾದರೆ ಅವನ ಮಾತುಗಳು ನಿಜದಿಂದ ಬಹುದೂರವಾದದ್ದೇನಲ್ಲ ಎನ್ನಬಹುದು. ಆನೆ, ಕಾಡೆಮ್ಮೆಗಳಂತಹ ಹಿರಿಯ ಪ್ರಾಣಿಗಳು ನಿರ್ನಾಮ ಆದದ್ದೇ ಅಲ್ಲದೆ, ಹುಲಿ, ಚಿರತೆಗಲೂ ಬಹುತೇಕ ಇಲ್ಲವಾಗಿವೆ. ಇತರ ಕಾಡು ಪ್ರಾಣಿಗಳಾದ ಜಿಂಕೆ, ಸಾರಂಗ, ಕಡವೆಗಳೂ ಕಡಮೆಯಾಗಿ, ಅವುಗಳನ್ನು ಹಿಂಡುಗಳಲ್ಲಿ ನೋಡುವುದೂ ಅಸಾಧ್ಯವಾಗಿದೆ. ಮೀಸಲು ವನಗಳ ಸುತ್ತಣ ಭೂಮಿಯನ್ನು ಕೃಷಿಗಾಗಿ ತೆರವುಮಾಡುವುದು, ಹೆಚ್ಚಿದ ರಸ್ತೆಗಳು, ವೇಗವಾಗಿ ಚಲಿಸುವ ವಾಹನಗಳು, ವಿಶೇಷವಾಗಿ ಅರಣ್ಯದ ಕಚ್ಚಾ ರಸ್ತೆ



ಗಳಲ್ಲಿ ಚಲಿಸುವ ಜೀಪುಗಳು, ಪರವಾನಗಿಯಿಲ್ಲದ ಆಯುಧಗಳ ಹೆಚ್ಚಳ, ಎಂಡ್ರಿನ್ ಮುಂತಾದ ಅತಿಸು ಲಭದರದ ತೀವ್ರ ವಿಷಗಳ ಆಗಮನ, ಮನುಷ್ಯನ ನಿಷ್ಕರುಣ ಬೇಟೆಯ ಸ್ವಭಾವ - ಇವೆಲ್ಲ ಸೇರಿ ಅರಣ್ಯಪ್ರಾಣಿಗಳ ಸಂಪತ್ತಿಗೆ, ಜೀವನಕ್ಕೆ ದೊಡ್ಡ ಕುತ್ತಾಗಿದೆ. ಇಂದು ಹಪಾಪಿ ನವಿಲುಗಳೂ ಸಂಖ್ಯೆಯಲ್ಲಿ ಕಡಮೆಯಾಗುತ್ತಿವೆ. ವನ್ಯಪ್ರಾಣಿಗಳಿಗೆ ಜೀವಿಸುವ, ಬೆಳೆಯುವ ಅವಕಾಶ ನೀಡಲೆಂದು ೧೯೭೨ ರಿಂದ ಜಿಲ್ಲೆಯಲ್ಲಿ ಎಲ್ಲ ಕಾಡುಗಳನ್ನು ಬೇಟೆಗಾಗಿ ಮುಚ್ಚಲಾಗಿದೆ.

ಕೊಂಬುಳ್ಳ ಪ್ರಾಣಿಗಳು ತಮಗೆ ವಾತಾವರಣ ಅನುಕೂಲವಾಗಿರುವುದರಿಂದ ತಿರುಪತಿ ಪ್ರಾಂತದಲ್ಲಿ ಹೆಚ್ಚಿಗೆ ಕಂಡುಬರುತ್ತದೆ.

ಈ ಪ್ರಾಂತದಲ್ಲಿನ ಹಕ್ಕಿಗಳ ಬದುಕು ಸ್ವಲ್ಪ ಮಟ್ಟಿಗೆ ಚೆನ್ನವೆನ್ನಬಹುದು. ಕಾರಣ ಕಳ್ಳ ಬೇಟೆಗಾರರು ಪಕ್ಷಿಗಳ ವಿನಾಶದತ್ತ ದೃಷ್ಟಿ ಹರಿಸಿಲ್ಲದಿರುವುದು ಹಾಗೂ ಅವುಗಳು ಹಾರುವ ಶಕ್ತಿ ಹಾಗೂ ತಮ್ಮ ಕಿರುಗಾತ್ರದಿಂದಾಗಿ ನಾಲ್ಕು ಕಾಲಿನ ಪ್ರಾಣಿಗಳಿಗಿಂತ ಚೆನ್ನಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳುವಲ್ಲಿ ಹೆಚ್ಚು ಸಮರ್ಥವಾಗಿರುವಿಕೆ. ಈ ಕಾಡುಗಳಲ್ಲಿ ವೈವಿಧ್ಯಮಯವಾದ ಹಕ್ಕಿಗಳು ಅನೇಕವಿದ್ದು ಚಳಿಗಾಲದಲ್ಲಿ, ದೂರದೂರದಿಂದ ಬರುವ ಹಕ್ಕಿಗಳಿಂದಲೂ ಅವುಗಳ ಸಂಖ್ಯೆ ಗಣನೀಯವಾಗಿ ಹೆಚ್ಚುವುದು. ಬಾಬ್ಲರ್‌ಗಳಲ್ಲಿ ದೊಡ್ಡ ಕೆಂದು ಬಣ್ಣದ ಬಾಬ್ಲರ್‌ಗಳು ಬಹು ಸಾಮಾನ್ಯ. ಮಳೆಗಾಲದಲ್ಲಿ ಹೆಚ್ಚುವ ಹುಳಗಳ ಸಂಖ್ಯೆಯನ್ನು ಮಿತಗೊಳಿಸುವ, ಹಿಡಿಯುವ ಶ್ರೈಕರ್‌ಗಳು ಜಿಲ್ಲೆಯ ಮುಖ್ಯ ರಸ್ತೆಗಳಲ್ಲಿ ಹುಳ ಹೆಕ್ಕುತ್ತಿರುವುದನ್ನು ಕಾಣಬಹುದು. ಕಾಗೆಗಳು ಮೈನಾಗಳೂ ಜಾನುವಾರುಗಳ ಬೆನ್ನಿನಲ್ಲಿ ಸದಾ ಕಾಣುತ್ತದೆ. ಇತರೆಯವಾದ ಬೀ ಈಟರ್ಸ್, ವಾರ್ಬ್ಲರ್ಸ್, ಹೂಪನ್ ಮೊದಲಾದವೂ ಕಂಡುಬರುತ್ತವೆ. ರಣಹದ್ದುಗಳು ಇಡೀ ಜಿಲ್ಲೆಯಲ್ಲಿ ಕಾಣಬರುತ್ತವೆ. ಕ್ರಿಮಿಕೀಟಗಳ ಸಂಖ್ಯೆಯನ್ನು ಹದ್ದುಬಸ್ತಿನಲ್ಲಿಡುವ ಗೃಧ್ರಗಳು; ಗೂಬೆಗಳು, ಇವೆ. ಅಳಿಲು, ಮರಳು ಹಸಿರು ಗಿಣಿಗಳೂ ಸ್ಥಳೀಯ ಯಾನಾದಿಗಳಿಂದಲೂ, ಕಳ್ಳ ಸಾಗಣೆದಾರರೂ ಸುಂಡಿಲಿಗಳೂ ಹಿಡಿಯುವ ಪಕ್ಷಿಗಳಾಗಿವೆ. ಚಳಿಗಾಲದಲ್ಲಿ ಅಸಂಖ್ಯ ಬಾತುಕೋಳಿಗಳೂ, ಜಿಲ್ಲೆಯ ವಿವಿಧ ಕೆರೆಕಟ್ಟೆಗಳಲ್ಲಿ ಕಂಡುಬರುತ್ತವೆ. ವಿವಿಧ ಚುಕ್ಕೆಯ ಬಾತುಗಳು ಗಣನೀಯ. ಚೆನ್ನಗೊಟ್ಟಿ ಕಲ್ಲು ಕೆರೆಯಲ್ಲಿ ಚಳಿಗಾಲದಲ್ಲಿ ಇವನ್ನೆಲ್ಲವನ್ನೂ ಕಾಣಬಹುದು. ಶಿಳ್ಳೆ ಹೊಡೆಯುವ ಹಕ್ಕಿಗಳನ್ನು ಚಳಿಗಾಲದಲ್ಲಿ ಕಾಣಬಹುದು. ಭತ್ತದ ಗದ್ದೆಗಳು ಗುಬ್ಬಚ್ಚಿಗಳನ್ನು ಕಾಣಬಹುದು. ಭತ್ತದ ಗದ್ದೆಗಳು ಹೆರಾನ್‌ಗಳನ್ನು, ಎಗ್ರೆಟ್‌ಗಳನ್ನೂ ಆಕರ್ಷಿಸುತ್ತವೆ. ತಿರುಪತಿ, ಭಾಕರಾಪೇಟೆ ಮದನಪಲ್ಲಿಗಳಲ್ಲಿ ಈಗಲೂ ನವಿಲುಗಳನ್ನು ಎಲ್ಲ ಕಾಲದಲ್ಲೂ ನೋಡಬಹುದು. ತಿರುಮಲೆಯ ಘಟ್ಟದ ರಸ್ತೆಯ ೬-೮ ಮೈಲಿಗಳ ಮಧ್ಯದಲ್ಲಿ ಸಂಜೆ ಹೊತ್ತು ರಸ್ತೆಯನ್ನು ದಾಟುತ್ತಿರುವುದನ್ನು ನೋಡಬಹುದಾಗಿದೆ.

ಜಿಲ್ಲೆಯಲ್ಲಿ ಅಸಂಖ್ಯವಾದ ವಿಷಪೂರಿತ ಹಾಗೂ ವಿಷಹೀನ ಹಾವುಗಳನ್ನು ಕಾಣಬಹುದು. ಹಿಂದೂಗಳು ದೇವರೆಂದೇ ಗೌರವಿಸುವ ನಾಗರ ಚೌತಿಯಂದು ಹಾಲನೆರೆಯುವ ಹುತ್ತಗಳಲ್ಲಿನ ನಾಗರ ಹಾವು ಇವುಗಳಲ್ಲಿ ಸಾಮಾನ್ಯವಾದದ್ದು. ವೈಪರ್, ಕ್ರೈಟಗಳೂ ಈ ಪ್ರದೇಶದಲ್ಲಿ ಸಾಮಾನ್ಯ. ಒಳಕಾಡುಗಳಲ್ಲಿ ಹೆಬ್ಬಾವು ಇದೆಯೆಂದು ಹೇಳಿದರೂ ಕಣ್ಣಿಗೆ ಕಂಡಿಲ್ಲ. ಮಿಕ್ಕಂತೆ ವಿಷಹೀನ ಹಾವುಗಳಲ್ಲಿ ಕೇರೆಹಾವು, ನೀರಹಾವುಗಳು ಕ್ರಿಮಿಕೀಟಗಳ ಸಂಖ್ಯೆಯನ್ನು ಹದ್ದಿನಲ್ಲಿಡುವ ಕೆಲಸದಲ್ಲಿ ತೊಡಗಿರುವುದನ್ನು ಹಳ್ಳಿಗಳ ಸುತ್ತ ಮುತ್ತ ಕಾಣಬಹುದು.

ಹಾವುರಾಣಿಗಳಲ್ಲಿ, ಹಲ್ಲಿಗಳೂ, ಸಾಮಾನ್ಯವಾಗಿವೆ. ಆಮೆಗಳಲ್ಲಿ ಮೃದು ಚರ್ಮದ ಆಮೆಗಳು ಕೆರೆಬಾವಿಗಳಲ್ಲಿ ಕಂಡುಬರುವುವು. ಇವು ಭೂಚರಗಳಾಗಿ ಕಲ್ಲುಗಳ ತೆಗ್ಗು ತೆವರುಗಳಲ್ಲಿ ಕುಳಿತ ಹಿನ್ನೆಲೆಯ ವರ್ಣದೊಂದಿಗೆ ಬೆರೆತಿರುತ್ತದೆ. ಮೀನುಗಳು ವೈವಿಧ್ಯ ಮಯವಾಗಿ ಕೆರೆ, ಹೊಳೆಗಳಲ್ಲಿ ಕಂಡುಬರುತ್ತವೆ.

(ಮುಂದಿನ ತಿಂಗಳು - ಐತಿಹಾಸಿಕ ಹಿನ್ನೆಲೆ)



# ಶ್ರೀರಂಗ ಮಹಾತ್ಮೆ

---ಕಂದಾಡೈ ಕೇಶವನ್.

ಭಾರತ ಅನೇಕ ಪವಿತ್ರ ತೀರ್ಥಕ್ಷೇತ್ರಗಳ ದೇಶ. ಪ್ರತಿಯೊಬ್ಬ ಭಾರತೀಯನೂ ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ಪವಿತ್ರ ಕ್ಷೇತ್ರಗಳ ದರ್ಶನ ಮಾಡಿ ಕೃತಾರ್ಥನಾಗಬೇಕೆಂದು ಆಶಿಸುತ್ತಾನೆ. ಎಲ್ಲಾ ೧೦೮ ದಿವ್ಯಕ್ಷೇತ್ರಗಳ ದರ್ಶನವಾಗದಿದ್ದರೂ, ಪವಿತ್ರ ತೀರ್ಥ ಕ್ಷೇತ್ರಗಳಲ್ಲಿ ಮುಕ್ತಿದಾಯಕಗಳೆಂದು ಪ್ರಸಿದ್ಧವಾಗಿರುವ ಅಯೋಧ್ಯೆ, ಮಥುರೆ, ಮಾಯೆ, ಕಾಶೀ, ಕಾಂಚೀ, ಉಜ್ಜಯಿನೀ, ದ್ವಾರಕಾ ಮತ್ತು ಜಗನ್ನಾಥ ಪುರೀ - ಇವುಗಳನ್ನಾದರೂ ಸಂದರ್ಶಿಸಿ ಪುಣ್ಯವನ್ನು ಗಳಿಸಬೇಕೆಂದು ಹಿಂದಿನಿಂದ ಬಂದ ನಂಬಿಕೆ--

ಅಯೋಧ್ಯಾ ಮಥುರಾ ಮಾಯಾ
ಕಾಶೀ ಕಾಂಚೀ ಅವಂತಿಕಾ
ಪುರೀ ದ್ವಾರವತೀ ಚೈವ
ಸಪ್ತೈತೇ ಮೋಕ್ಷದಾಯಕಾಃ

ಆದರೆ ಶ್ರೀವೈಷ್ಣವರಿಗೆ ಶ್ರೀರಂಗ, ತಿರುಮಲೆ, ಕಾಂಚೀಪುರ ಹಾಗೂ ತಿರುನಾರಾಯಣ ಪುರ (ಮೇಲುಕೋಟೆ) ಪವಿತ್ರ ಸ್ಥಳಗಳಾಗಿದ್ದು, ಅವುಗಳ ದರ್ಶನ ಪಾಪನಾಶನ ಪುಣ್ಯಪ್ರದವೆಂದು ಅಂಚಲವಾದ ಶ್ರದ್ಧೆ, ಭಕ್ತಿ, ಪ್ರತಿಯೊಬ್ಬ ಶ್ರೀವೈಷ್ಣವನೂ ಸಂಧ್ಯಾವಂದನೆ ಮಾಡಿದ ತರುವಾಯ ತಪ್ಪದೆ ಪಠಿಸುವ ಶಾಂತಿ ಮಂತ್ರ-

ಶ್ರೀರಂಗ ಮಂಗಳ
ಮಣಿಂ ಕರುಣಾ ನಿವಾಸಂ
ಶ್ರೀ ವೆಂಕಟಾದ್ರಿ
ಶಿಖರಾಲಯ ಕಾಳ ಮೇಘಂ
ಶ್ರೀ ಹಸ್ತಿ ಶೈಲ
ಶಿಖರೋ ಜ್ವಲ ಪಾರಿಜಾತಂ
ಶ್ರೀಶಂ ನಮಾಮಿ
ಶಿರಸಾ ಯದುಶೈಲದೀಪಂ

ನಾವು ಪ್ರತಿ ನಿತ್ಯ ಸ್ನಾನ ಮಾಡುವಾಗ ತಪ್ಪದೆ ಸ್ಮರಿಸುವ ಮಂತ್ರ--

ಗಂಗೇ ಚ ಯಮುನೇ ಚೈವ
ಗೋದಾವರಿ ಸರಸ್ವತಿ
ನರ್ಮದೇ ಸಿಂಧು ಕಾವೇರಿ
ಜಲೇಽಸ್ಮಿನ್ ಸನ್ನಿಧಿಂ ಕುರು

ತಮಿಳು ನಾಡಿನ ತಿರುಚನಾಪಳ್ಳಿಗೆ ಉತ್ತರದಲ್ಲಿ ಸುಮಾರು ೫ ಕಿಲೋಮೀಟರ್ ದೂರದಲ್ಲಿ ಕಾವೇರಿ ನದಿಯ ಎರಡು ಕವಲಿನ ಮಧ್ಯೆ ನೆಲೆಸಿರುವ ಪವಿತ್ರ ಕ್ಷೇತ್ರವೇ ಶ್ರೀರಂಗ. ಶ್ರೀರಂಗ ಮಹಾತ್ಮವು ಸಂಸ್ಕೃತದಲ್ಲಿ ಶ್ರೀ ಗರುಡ ಪುರಾಣದಲ್ಲಿ ೧೦೮ ಅಧ್ಯಾಯಗಳಲ್ಲಿ ಸವಿಸ್ತಾರವಾಗಿ ವರ್ಣಿತವಾಗಿದೆ. ಬ್ರಹ್ಮಾಂಡಪುರಾಣ ೫ ಅಧ್ಯಾಯಗಳಲ್ಲಿ ಶ್ರೀರಂಗ ಮಹಾತ್ಮೆಯನ್ನು ವಿವರಿಸಲಾಗಿದೆ. ಪದ್ಮ ಪುರಾಣ, ವಾಲ್ಮೀಕಿ ರಾಮಾಯಣ ಉತ್ತರಕಾಂಡಗಳಲ್ಲಿ ಶ್ರೀರಂಗದ ಬಗ್ಗೆ ಉಲ್ಲೇಖಗಳಿವೆ. ಇದರ ಮಹಿಮೆಯ ಬಗ್ಗೆ ಕನ್ನಡದಲ್ಲಿ ಹದಿನಾರನೆಯ ಶತಮಾನದ ತರುವಾಯ ಹಲವು ಕೃತಿಗಳು ರಚಿತವಾದವು. ಮೊತ್ತ ಮೊದಲನೆಯದಾಗಿ ೧೫೭೦ ರಲ್ಲಿ ರಂಗಾಚಾರ್ಯ ಎಂಬುವ ವೈಷ್ಣವ ಕವಿ ಗದ್ಯರೂಪದಲ್ಲಿ ೧೦ ಪರಿಚ್ಛೇದಗಳಲ್ಲಿ ಸಂಸ್ಕೃತದ ಬ್ರಹ್ಮಾಂಡ ಪುರಾಣದ ಮಹೇಶ್ವರ ನಾರದರ ಸಂವಾದ ರೂಪಕಗಳನ್ನು ಕನ್ನಡದಲ್ಲಿ ಸೊಗಸಾಗಿ ರಚಿಸಿದ್ದಾನೆ. ಬ್ರಹ್ಮಾಂಡ ಪುರಾಣದ ಮೂಲವನ್ನು ಅನುಸರಿಸಿ ಈ ಕೆಳಗಿನ ಕವಿಗಳು ಕನ್ನಡದಲ್ಲಿ ಶ್ರೀರಂಗ ಮಹಿಮೆಯನ್ನು ಬರೆದಿದ್ದಾರೆ.

೧) ೧೬೭೮ ರಲ್ಲಿ ಮಲ್ಲಿಕಾರ್ಜುನ ಕವಿಯ ಶ್ರೀರಂಗ ಮಹಾತ್ಮ - ಚಂಪೂಧಾಟಿಯಲ್ಲಿ.

೨) ೧೬೮೦ ರಲ್ಲಿ ಚಿಕುಪಾಧ್ಯಾಯನ ಶ್ರೀರಂಗ ಮಹಾತ್ಮಂ. ೩) ೧೬೮೦ ರಲ್ಲಿ ಸಿಂಗರಾರ್ಯರ ಶ್ರೀರಂಗ ಮಹಾತ್ಮಂ.

೪) ೧೮೯೦ ರಲ್ಲಿ ಅಪ್ಪಲಾಚಾರ್ಯರ ಕೃತಿ

೫) ಚಿಕುಪಾಧ್ಯಾಯನ ೧೦೨ ಪದ್ಯಗಳ ರಂಗಧಾಮಸ್ತುತಿ ಸಾಂಗತ್ಯ

## ಚಿಕುಪಾಧ್ಯಾಯನ ಶ್ರೀರಂಗಮಹಾತ್ಮಂ

ಚಿಕ್ಕದೇವರಾಜನ ಆಸ್ಥಾನ ಪಂಡಿತನಾಗಿದ್ದ ಚಿಕುಪಾಧ್ಯಾಯನ ಶ್ರೀರಂಗ ಮಹಾತ್ಮೆ ಗದ್ಯರೂಪದಲ್ಲಿ ರಚಿತವಾದ ಸುಂದರ ಗ್ರಂಥ. ಚಿಕುಪಾಧ್ಯಾಯನು ಶ್ರೀರಂಗನಾಥನ ಪರಮ ಭಕ್ತ. ಶ್ರೀರಂಗ ಮಹಾತ್ಮೆಯನ್ನು ಬರೆದ ಕವಿ ತೃಪ್ತನಾಗದೆ ಅಕ್ಷರಮಾಲಿಕಾ ಸಾಂಗತ್ಯ ಎಂಬುವ ೧೦೪ ಪದ್ಯಗಳಿಂದ ಶ್ರೀರಂಗನಾಥನನ್ನು ಸ್ತುತಿಸಿದ್ದಾನೆ. ಮತ್ತೆ ೧೦೨ ಪದ್ಯಗಳಿಂದ ರಂಗಧಾಮ ಪುರುಷ ವಿರಹದ ಸಾಂಗತ್ಯ ಎಂಬುವ ಗ್ರಂಥದಲ್ಲಿ ಶ್ರೀರಂಗನಾಥನ ವಿರಹವನ್ನು ವರ್ಣಿಸಿದ್ದಾನೆ. ಇನ್ನೊಂದು ರಂಗಧಾಮ ನೀತಿ ಶತಕದ ಸಾಂಗತ್ಯ ೧೦೧ ಪದ್ಯಗಳಲ್ಲಿ ರಂಗನಾಥನ ಸ್ತುತಿ ಹಾಗೂ ನೀತಿ ಬೋಧನೆ. ಶ್ರೀರಂಗನಾಥನ ಪಾದುಕಾ ಸಹಸ್ರದ ಟೀಕು ಎಂಬುವ ಟೀಕಾ ಗ್ರಂಥ ಮತ್ತು ರಂಗಸ್ವಾಮಿಯ ಶೃಂಗಾರ ಸೂತ್ರೋದಾಹರಣೆ ಎಂಬುವ ಕಂದ ರೂಪವಾದ ಸೂತ್ರ ಪದ್ಯಗಳ ಗ್ರಂಥ. ಕೊನೆಯದಾದ ರಂಗನಾಯಕ ರಂಗನಾಯಕೀಸ್ತುತಿ ಸಾಂಗತ್ಯ ಎಂಬುವ ೪೯ ಸಾಂಗತ್ಯ ಪದ್ಯಗಳ ಸಂಕಲನ. ಈ ವೈಷ್ಣವ ಕವಿ ಚಂಪುವಿನಲ್ಲಿ ಹಸ್ತಗಿರಿ ಮಹಾತ್ಮೆಯನ್ನೂ, ಗದ್ಯದಲ್ಲಿ ತಿರು













ಕಂಚಿ ಪರಮಾಚಾರ್ಯಸ್ವಾಮಿ

# ನವಜೀವನ ಅಂಧರ ಸಹಾಯ ಕೇಂದ್ರ (ನೋಂ)

## (ವೃದ್ಧರ, ಅಂಧರ ಉಚಿತ ಆವಾಸ ಕೇಂದ್ರ)

## 2-21 ಅ. ಸಪ್ತಗಿರಿ ಆಶ್ರಮ

**ತಿರುಚಾನೂರು - ತಿರುಪತಿ - 517 503.**

# ಮ ನ ವಿ

ಕಂಚಿಕಾಮಕೋಟಿ ಪೀಠದ ಶ್ರೀ ಶಂಕರಾಚಾರ್ಯರ ವಿಶೇಷ ಅನುಗ್ರಹದಿಂದ ಕಳೆದ 16 ವರ್ಷದಿಂದ ನವಜೀವನ ಆಶ್ರಮ ನೇತ್ರಹೀನರಿಗೆ ವೃದ್ಧರಿಗೆ ಅನೇಕ ಸಹಾಯ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**ದಾನಗಳಲ್ಲಿ ಶ್ರೇಷ್ಠದಾನ ಅನ್ನದಾನ :** ಎಲ್ಲ ದಾನಗಳಲ್ಲೂ ಅನ್ನದಾನ ಶ್ರೇಷ್ಠವೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಅದರಲ್ಲೂ ತಿರುಪತಿ, ರಾಮೇಶ್ವರ ಕಾಶಿ ಮೊದಲಾದ ಪುಣ್ಯಸ್ಥಳಗಳಲ್ಲಿ ಮಾಡುವ ಅನ್ನದಾನದಿಂದ ದಾತರಿಗೆ ದೊಡ್ಡ ಪುಣ್ಯಫಲ ಲಭಿಸುತ್ತದೆ.

**ನಾರಾಯಣಸೇವೆ :** ತಿರುಪತಿಯ ನವಜೀವನ ಆಶ್ರಮದಲ್ಲಿ ನಾರಾಯಣ ಸೇವೆಯಾಗಿ ನಿತ್ಯವೂ ಮೂರುಹೊತ್ತು ದಾತರ ನೆರವಿನಿಂದ ನೇತ್ರಹೀನರಿಗೆ, ವೃದ್ಧರಿಗೆ, ಅನಾಥರಿಗೆ ಅನ್ನದಾನ ನಡೆಯುತ್ತಿದೆ. ಒಂದು ದಿನದ ಅನ್ನದಾನಕ್ಕೆ ಸುಮಾರು ರೂ. 500/- ವೆಚ್ಚವಾಗುತ್ತಿದೆ. ದಯೆಯುಳ್ಳ ದಾನಿಗಳು ತಮ್ಮ ಹುಟ್ಟಿದ ದಿನ, ವಿವಾಹದ ದಿನ, ಮಕ್ಕಳ ಜನ್ಮದಿನ, ಅಥವಾ ಕೀರ್ತಿಶೇಷರಾದವರ ಪುಣ್ಯತಿಥಿಯಯಂದು ಒಂದು ದಿನದ ಅನ್ನದಾನಕ್ಕೆ ರೂ. 500/- ವಂತಿಗೆಯನ್ನು ನೀಡಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದ ಹೊಂದಬೇಕೆಂದು ಕೋರುತ್ತೇವೆ.

ಅನ್ನದಾನ ಮಾಡುವ ದಾತರ ಗೋತ್ರನಾಮಗಳೊಡನೆ ಶ್ರೀ ವೆಂಕಟೇಶ್ವರಸ್ವಾಮಿ, ಅಲಮೇಲು ಮಂಗಮ್ಮವರಲ್ಲಿ ಪ್ರಾರ್ಥನೆ ಸಲ್ಲಿಸಿ ಪ್ರಸಾದವನ್ನು ಪೋಸ್ಟ್ ಮೂಲಕ ಕಳುಹಿಸಲಾಗುವುದು. ದಾತರು ತಮ್ಮ ವಂತಿಗೆಗಳನ್ನು ಚೆಕ್, ಡಿ.ಡಿ., ಎಂ.ಓ. ಗಳ ಮೂಲಕ ನವಜೀವನ ಬ್ಲೈಂಡ್ ರಿಲೀಫ್‌ಸೆಂಟರ್ ತಿರುಪತಿ - ಇವರ ಹೆಸರಿಗೆ ಕಳುಹಿಸಬೇಕೆಂದು ಕೋರುತ್ತೇವೆ.

**|| ಶ್ರೇಯೋ ಭೂಯಾತ್ ಸಕಲ ಜನಾನಾಮ್ ||**

ಫೋನ್ - 25992,
ನವಜೀವನ ಅಂಧರ ಸಹಾಯಕೇಂದ್ರ,
ಸಪ್ತಗಿರಿ ಆಶ್ರಮ - ತಿರುಚಾನೂರು,
ತಿರುಪತಿ - 517 503

ಮಾನವ - ಮಾಧವ ಸೇವೆಯಲ್ಲಿ
**ಸ್ವಾಮಿ ಶ್ರೀಧರ ಆಚಾರ್ಯ**
ಸಂಸ್ಥಾಪಕರು / ಅಧ್ಯಕ್ಷರು.

ಪತಿ ವೆಂಕಟಗಿರಿ ಮಹಾತ್ಮೆಯನ್ನೂ, ಸಾಂಗತ್ಯದಲ್ಲಿ ಪಶ್ಚಿಮ ರಂಗ ಮಹಾತ್ಮೆ - ಮೈಸೂರಿನ ಶ್ರೀರಂಗ ಪಟ್ಟಣದ ಶ್ರೀರಂಗನಾಥನ ವೈಭವವನ್ನೂ, ಮೇಲು ಕೋಟೆ ಯಾದವಗಿರಿ ಮಹಾತ್ಮೆಯನ್ನು ಸಾಂಗತ್ಯ ದಲ್ಲಿ ರಚಿಸಿದ್ದಾನೆ. ಚಿಕುಪಾಧ್ಯಾಯನ ಶ್ರೀರಂಗಮ ಹಾತ್ಮೆ ಸುಲಭವಾದ ಶೈಲಿಯಲ್ಲಿ ಪಂಡಿತ ಪಾಮರ ರನ್ನು ರಂಜಿಸುವ ಭಕ್ತಿ ಗ್ರಂಥ. ಸಂಸ್ಕೃತ ಬ್ರಹ್ಮಾಂಡ ಪುರಾಣದಲ್ಲಿ ಉಕ್ತವಾಗಿರುವ ಶ್ರೀರಂಗ ಮಹಿಮೆ ಯನ್ನು ಕವಿ ಅಕ್ಷರಶಃ ಕನ್ನಡಕ್ಕೆ ಭಾಷಾಂತರಿಸಿರುವು ದನ್ನು ನಾವು ಮುಂದಿನ ತುಲನಾತ್ಮಕ ವಿಮರ್ಶೆಗ ಳಲ್ಲಿ ಕಾಣಬಹುದು. ಕವಿ ಪ್ರಥಮ ಪರಿಚ್ಛೇದದಲ್ಲಿ ಪ್ರಥಮ ಮಂಗಳ ಶ್ಲೋಕ ಹೀಗಿದೆ. ಶಾರ್ದೂಲ ವಿಕ್ರೀಡಿತದಲ್ಲಿ

ಶ್ರೀಕಾಂತಂ ಶ್ರಿತರಕ್ಷಣಾ
ನಿರತನಂ ಭೋಜಾತ ಪತ್ರೇಕ್ಷಣಂ
ನಾಕಾಧೀಶ್ವರ ಮುಖ್ಯ ದೇವಗಣಮಧ್ಯಂ
ರಾಕ್ಷಸಾರಾತಿ ವಿಶ್ವಾಕಾರಂ
ಫಣಿರಾಜ ಕಲ್ಪಶಯನಂ
ಸಹ್ಯಾತ್ಮಗಾಮಧ್ಯಗಂ ಲೋಕೇಶಂ
ವರದಾತನಕ್ಕೆಮಗೆ ಶ್ರೀರಂಗೇಶ ನೊಲ್ದಾವಗಂ

ಕವಿ ತನ್ನ ವಿಚಾರವಾಗಿ ಈ ಪ್ರಥಮ ಅಧ್ಯಾಯ ದಲ್ಲಿ ತನ್ನ ತಂದೆ ರಂಗಾಚಾರ್ಯನೆಂಬ ವಿದ್ವಾಂಸ ನೆಂದೂ ತನ್ನ ತಾಯಿ ನಾಚ್ಚಾರಮ್ಮ ನೆಂದೂ, ಇವ ರಿಗೆ ಇಬ್ಬರು ಅವಳಿಮಕ್ಕಳು. ತಾನೂ ಹಾಗೂ ತನ್ನ ಕಿರಿಯ ಸೋದರ ದೇವರಾಜನೆಂಬುವನು ಎಂಬು ವುದಾಗಿ ತಿಳಿಸಿದ್ದಾನೆ.

ಕವಿಯ ಜನ್ಮಸ್ಥಳ ತೆರಕಣಾಂಬಿಯ ತ್ರಿಕದಂಬ ಪುರ. ಕವಿಯು ಮೈಸೂರು ಅರಸರಾದ ಚಿಕ್ಕ ದೇವರಾಜ ಒಡೆಯರ ಆಸ್ಥಾನ ಕವಿ. ಕಾಲ ಕ್ರಿ.ಶ. ೧೬೭೨ ರಿಂದ ೧೭೦೪ ಅಂತರದಲ್ಲಿ ಚಿಕುಪಾಧ್ಯಾ ಯನಿಂದ ರಚಿತವಾದ ಗ್ರಂಥಗಳು ಸುಮಾರು ೪೦. ಶ್ರೀರಂಗ ಮಹಾತ್ಮೆಯ ಮೊದಲನೆಯ ಅಧ್ಯಾಯ ಮಾತ್ರ ಕಂದ ಹಾಗೂ ವಚನಗಳಿಂದ ಕೂಡಿದೆ. ಮೊದಲನೆಯ ಪದ್ಯ ಶ್ರೀರಂಗನ ಸ್ತುತಿ. ತರು ವಾಯ ವರದರಾಜ ಲಕ್ಷ್ಮಿ, ಹನ್ನೆರಡು ಆಳ್ವಾರರ ಸ್ತುತಿ. ಭಾಷ್ಯಕಾರರನ್ನು ವಂದಿಸಿದ ಮೇಲೆ ತನ್ನ ಪ್ರಭುವಾದ ಚಿಕ್ಕದೇವರಾಜರ ವಂಶಾವಳಿಯನ್ನು ವಿವರಿಸಿದ್ದಾನೆ. ಪ್ರಥಮ ಪರಿಚ್ಛೇದದಲ್ಲಿ ಶ್ರೀರಂಗ ಮಹಾತ್ಮೆಯನ್ನು ವರ್ಣಿಸುತ್ತಾ ಕವಿ ಶ್ರೀ ಕಾವೇರಿ ಮಧ್ಯಸ್ಥಮಾದ ಚಂದ್ರ ಪುಷ್ಕರಿಣಿಯ ತಟಿಯಲ್ಲಿ ಲಕ್ಷ್ಮಿಯಿಂದ ಸೇವಿತವಾದ ಇಷ್ಟಪ್ರಾಪ್ತಿಗೂ ಅನಿಷ್ಟ ನಿವಾರಣಕ್ಕೂ ಉತ್ಪತ್ತಿ ಸ್ಥಾನಮಾದ ಶ್ರೀರಂಗವೆಂ ಬುದೊಂದು ಕ್ಷೇತ್ರಮುಂಟು. ಚೈತನ್ಯವಸ್ತುಗ ಳಾದ ಜನರ್ಗೆ ಶ್ರೀರಂಗನಾಥನ ಸೇವೆ ಯುಕ್ತವೆಂ ತಿದ್ದಾರು ಆವನಾನೋರ್ವ ಪುರುಷಂ ಶ್ರೀರಂಗಮಂ ಐದಿ ಸೇವಿಸುತ್ತಿದ್ದಾತನು ಶೌರವಾದಿ ನರಕಂಗಳಂ ಐದನು.

ಕ್ರಿಮಿ ಕೀಟಾದಿ ಹೇಯ ಜನ್ಮಗಳಂ ಪಡೆಯನು. ತದ್ಧೇತುಕಮಾದ ಜ್ಞಾನ ಸಂಕೋಚಮಂ, ಮೋಕ್ಷ ಪ್ರತಿಬಂಧಕಮಾದ ಅಜ್ಞಾನಮಂ ಧರಿಸನು, ಅದು ಗೋಚರತ್ವರಿಲ್ಲದುದರಿಂ ಮೋಕ್ಷಮೆ ಸಿದ್ಧಮಕ್ಕುಂ, ಈ ಪ್ರಕಾರಮಾದ ರಂಗಕ್ಷೇತ್ರಮಂ ಆವ ಪುರು ಷನು ಸೇವಿಸನು. ಸಕಲ ಜನಂಗಳು ಸೇವಿ ಸದೇಕೆಂಬುದೇ ವಿಧಿಯಕ್ಕುಂ, ಶ್ರೀರಂಗ ಸೇವಾಸ ಕ್ತರ್ಗೆ ಶ್ರೀರಂಗೋಚ್ಚಾರಣಮೆ, ಶ್ರೇಷ್ಠಮೆಂತಿದ್ದಾರು ಸಾವಿರಯೋಜನ ದೂರದಲ್ಲಾದೊಡಂ ಅಂಗ ವಂಗಾದಿ ದೇಶಗಳಲ್ಲಾದೊಡಂ ಪಕ್ಷಾದಿ ದ್ವೀಪಂ ಗಳಲ್ಲಾದೊಡಂ, ವಾಸಿಯಾದ, ಪುರುಷಂ ಶ್ರೀರಂ ಗಾಭಿಮುಖವಾಗಿ ನಮಸ್ಕರಿಸಿ ಶ್ರೀರಂಗ ಮೆಂದು ಚ್ಚರಿಸೆ ಮೋಕ್ಷಂ ದೊರಕೊಂಬುದು. ಸಂಸ್ಕೃತದ ಬ್ರಹ್ಮಾಂಡಪುರಾಣದ ಒಂದನೆಯ ಅಧ್ಯಾಯದಲ್ಲಿ ಮೇಲಿನ ಕವಿಯ ಭಾಷಾಂತರ ಸವಿಯಲು ಈ ಸಂಸ್ಕೃತ ಶ್ಲೋಕಗಳನ್ನೂ ಓದಿ--

ಮರುದ್ವಧಾಯಾ ಮಧ್ಯಸ್ಥಂ
ಚಂದ್ರಪುಷ್ಕರಿಣೀತಟೇ
ಶ್ರೀರಂಗ ಮತುಲಂ ಕ್ಷೇತ್ರಂ
ಶ್ರಿಯಾಜುಷ್ಟಂ ಶುಭಾಸ್ಪದಂ
ತತ್‌ಗತ್ವಾ ನ ನರೋಯಾತಿ
ನರಕಂ ನಾಪ್ಯಧೋಗತಿಂ
ನ ಚ ಜ್ಞಾನಸ್ಯ ಸಂಕೋಚಂ
ನಚೈಮ ಯಮ ಗೋಚರಂ
ತಸ್ಮಾತ್ ರಂಗಂ ಮಹತ್ ಪುಣ್ಯಂ
ಕೋನ ಸೇವೇತ ಬುದ್ಧಿಮಾನ್
ರಂಗಂ ರಂಗಂ ಇತಿ ಬ್ರೂಯಾತ್
ಕ್ಷುತಪ್ರಸ್ಖಲನಾದಿಷು
ಬ್ರಹ್ಮಲೋಕ ಮವಾಪ್ನೋತಿ
ಸದ್ಯಃ ಪಾಪಕ್ಷಯಾನ್ನರಃ
ಕ್ಷುತೇ ನಿಷ್ಠೀವನೇಚೈವ
ಜೃಂಭಿಕಾಯಾಂ ತಥಾನೃತೇ
ಪತಿತಾನಾಂತು ಸಂಭಾಷೇಷೇ
ರಂಗಮಿತ್ಯುಚ್ಚತೇ ಬುಧೈಃ
ಯೋಜನಾನಾಂ ಸಹಸ್ರೇಷು
ಯತ್ರ ಕ್ವಚನ ಸಂಸ್ಥಿತಃ
ಶ್ರೀರಂಗ ಮಿತಿಯೋ ಬ್ರೂಯಾತ್
ಸಯಾತಿ ಪರಮಾಂ ಗತಿಂ
ದೇಶಾಂತರ ಗತೋವಾಪಿ
ದ್ವೀಪಾಂತರ ಗತೋಪಿವಾ
ಶ್ರೀರಂಗ ಅಭಿಮುಖೋಭೂತ್ವಾ
ಪ್ರಣಿಪತ್ಯ ನ ಸೀದತಿ

ಶ್ರೀರಂಗ ಮಹತ್ಮೆಯನ್ನು ಕವಿ ಇನ್ನೂ ವಿಸ್ತಾರ ವಾಗಿ ತಿಳಿಸುತ್ತಾ, ಚಂದ್ರಪುಷ್ಕರಿಣೀ ಸ್ನಾನಂ, ಅದರ ತೀರದಲ್ಲಿಹ ರಂಗ ವಿಮಾನ ದರುಶನಂ, ಏಕಾದ ಶಿಯ ಉಪವಾಸಂ ತೊಳಸೀದಳ ಭಕ್ಷಣಂ, ಭಗವ ದ್ಗೀತಾ ಪಠಣಂಗಳೊಂದೆ ಜನ್ಮದಲ್ಲಿಯೆ ಸಂಭವಿಸಿ ದಾತಂಗೆ ಸಾಧ್ಯಮಲ್ಲದ ವಸ್ತುವಿಲ್ಲಾಗಿ ಆ ಪುರುಷಂ ನಾರಾಯಣನಂತೆ ನಮಸ್ಕಾರಯೋಗ್ಯನೆಂದು ತಿಳಿ ಯಲ್ವೇಳ್ಕುಂ. ಹೀಗೆ ಕವಿ ಮನುಷ್ಯನು ಎಲ್ಲಿಯೇ ಇರಲಿ ಅವನು ಶ್ರೀರಂಗಕ್ಕೆ ಅಭಿಮುಖವಾಗಿನಿಂತು ಶ್ರೀರಂಗನ ಉಚ್ಚಾರಣೆ ಮಾಡಿದ್ದ ಮಾತ್ರಕ್ಕೆ ಆತ ನಿಗೆ ಮುಕ್ತಿ ದೊರಕುವುದು ಎಂಬುವುದಾಗಿ ತಿಳಿ ಸುತ್ತಾ, ಶ್ರೀರಂಗದ ಚಂದ್ರ ಪುಷ್ಕರಿಣೀ ಸ್ನಾನ ರಂಗ ವಿಮಾನದರ್ಶನ. ತುಲಸೀದಳ ಭಕ್ಷಣ, ಏಕಾದಶೀ ದಿನ ಉಪವಾಸ, ಶ್ರೀಮದ್ ಭಗವದ್ಗೀತಾ ಪಠನ ಇವುಗಳನ್ನು ಆಚರಿಸುವವನು ಶ್ರೀಮನ್ನಾರಾಯಣ ನಿಗೆ ಸಮಾನನಾಗಿ ನಮಸ್ಕರಿಸಲು ಯೋಗ್ಯನಾಗು ವನು. ಯಾರು ಕಾವೇರಿ ಸ್ನಾನಮಾಡಿ ಪಿತೃಶ್ರಾದ್ಧ ವನ್ನು ಆಚರಿಸಿ ಬ್ರಾಹ್ಮಣರನ್ನು ಭೋಜನ ದಕ್ಷಿಣೆ ಗಳಿಂದ ತೃಪ್ತಿಪಡಿಸಿದರೆ ಅಂತಹ ಪಿತೃಗಳಿಗೆ ಸ್ವರ್ಗ ಪ್ರಾಪ್ತಿ ನಿಶ್ಚಯ. ದೇವಾದಿದೇವತೆಗಳೂ ಕೂಡ ತಮ್ಮ ಪದವಿಗಳು ಅನಿತ್ಯವೆಂದು ತಿಳಿದು ಮೋಕ್ಷ ವನ್ನು ಕೊಡುವ ಶ್ರೀರಂಗಕ್ಷೇತ್ರದಲ್ಲಿ ವಾಸಮಾಡಲು ಮನುಷ್ಯ ಜನ್ಮವನ್ನು ಪಡೆಯಲು ಇಚ್ಛೆಪಟ್ಟರು. ಮಾರ್ಗಶಿರಮಾಸದಲ್ಲಿ ಕಾವೇರಿ, ಚಂದ್ರಪುಷ್ಕರಿಣೀ ಸ್ನಾನ, ಶ್ರೀರಂಗ ವಿಮಾನದರ್ಶನ ಮಾಡಿದವರಿಗೆ ಯಮನ ದರ್ಶನವಾಗುವುದಿಲ್ಲ.

ಕವಿ ಮತ್ತೆ ಶ್ರೀರಂಗಮಹಾತ್ಮೆಯನ್ನು ವರ್ಣಿ ಸುತ್ತಾ;

ಆವನಾನೋರ್ವ ಪುರುಷಂ
ಶ್ರೀರಂಗಯಾತ್ರೆಯುಂ
ಮಾಡುತ್ತಿದ್ದಾನಾತಂ
ಸೂರ್ಯ ಮಂಡಲಮಂ
ಭೇದಿಸಿಕೊಂಡು ವೈಕುಂಠಕ್ಕೆ
ಪೋಪಂತೆ ಆ ಶ್ರೀರಂಗಗಾಮಿಯಾದ
ಪುರುಷಂಗೆ ಅನ್ನದಾನಂ
ಮಾಡುತ್ತಿದ್ದಾನಾತಂ ಆತನಂತೆ
ವೈಕುಂಠವನೆ ಗಮಿಸುವಂ

ಹಾಗೆ ಶ್ರೀರಂಗಯಾತ್ರೆಯನ್ನು ಮಾಡುವವರಿಗೆ ಅನ್ನದಾನ ಮಾಡಿದರೆ ಅಪರಿಮಿತ ಪುಣ್ಯಪ್ರಾಪ್ತಿ ಸುವರ್ಣ, ಭೂ, ವಸ್ತ್ರ ದಾನಗಳಿಗಿಂತ ಶ್ರೀರಂಗ

ಸಾಧನ ಭಕ್ತರಿಗೆ ಒಂದು ಚೆಂಬು ಕಾವೇರಿ ಜಲ ವನ್ನು ಕೊಟ್ಟರೂ ಎಲ್ಲಾ ದಾನಗಳಿಗಿಂತ ಶ್ರೇಷ್ಠ ವಾದ ಫಲ ಲಭಿಸುತ್ತದೆ ಎಂಬುದಾಗಿ, ಚಿಕುಪಾಧ್ಯಾಯಕವಿ ವರ್ಣಿಸಿದ್ದಾನೆ. ಬ್ರಹ್ಮಾಂಡಪುರಾಣದ--

ಲಿಖಿತ್ವಾ ರಂಗ ಮಾಹಾತ್ಮ್ಯಂ
ವೈಷ್ಣವೇ ಭ್ಯೋ ದದಾತಿಯಃ
.........ವಿದ್ಯಾಂ ಕರಿಂ ಶ್ರಿಯಂ ಕಾಂತಿಂ
ಪೂರ್ಣಮಾಯುಃ ಪ್ರಜಾಂ ಪಶೂನ್
ವಿಷ್ಣು ಭಕ್ತಿಂ ಚ ಲಭತೇ
ಮತ್ ಪ್ರಸಾದಾತ್ ನ ಸಂಶಯಃ

ಎಂಬುವ ಭಾಗವನ್ನು ಕವಿ ಸರಳವಾದ ಕನ್ನಡ ದಲ್ಲಿ ಈ ಭಾಷಾಂತರ ಎಷ್ಟು ಸುಂದರ - ನೀವೇ ಗಮನಿಸಿ - ಆವ ಪುರುಷಂ ಈ ಶ್ರೀರಂಗ ಮಹಾತ್ಮ್ಯವಂ ಪಠಿಸುತ್ತಿದ್ದಾನು, ಕೇಳುತ್ತಿದ್ದಾನು, ಬರೆಯುತ್ತಿದ್ದಾನು, ಪಾಠವ ಮಾಡಿಕೊಂಡಿದ್ದಾನು, ಆ ಪುರುಷಂ ಏನೇನ ಅಪೇಕ್ಷಿಸಿದ್ದಾನಾ ಸಕಲಂಗಳಂ, -- ವಿದ್ಯೆ ಕೀರ್ತಿ, ಧನ ಧಾನ್ಯಾದಿ ಸಮೃದ್ಧಿ, ಪುಣ್ಯ ಆಯುಷ್ಯ ಆರೋಗ್ಯ ಸಂತಾನ, ಗೋಸಂಪತ್ತು, ವಿಷ್ಣುಭಕ್ತಿಗಳಂ ಪಡೆವಂ.

ದ್ವಿತೀಯ ಪರಿಚ್ಛೇದದಲ್ಲಿ ಜಗತ್ ಸೃಷ್ಟಿಯ ಪರಿಚಯವಿದೆ. ಆದಿಯಲ್ಲಿ ಶ್ರೀಮನ್ನಾರಾಯಣನು ಕ್ಷೀರ ಸಮುದ್ರದ ಮೇಲೆ ವಟಪತ್ರಶಾಯಿಯಾಗಿ ಯೋಗನಿದ್ರೆಯಲ್ಲಿ ಇರುವಾಗ ಜಗತ್ ಸೃಷ್ಟಿಯನ್ನು ಮಾಡಲು ನಿಶ್ಚಯಿಸಿದಾಗ ಆತನ ನಾಭಿಯಲ್ಲಿದ್ದ ಕಮಲದಲ್ಲಿ ಬ್ರಹ್ಮನ ಜನನ. ಹಂಸ ರೂಪಿಯಾಗಿ ಬಂದ ನಾರಾಯಣನಿಂದ ಬ್ರಹ್ಮನಿಗೆ ಪ್ರಣವ ಮಂತ್ರೋಪದೇಶ. ಬ್ರಹ್ಮನ ಸಾವಿರಾರು ವರ್ಷ ತಪಸ್ಸು, ತರುವಾಯ ಜಗತ್‌ಸೃಷ್ಟಿ, ಮುಂದೆ ಮಧುಕೈಟಭರ ಜನನ. ವೇದಾಪಹರಣ, ಮತ್ಸ್ಯಾವತಾರ, ಮಧುಕೈಟಭರ ಸಂಹಾರ, ವೇದಗಳ ಉದ್ಧಾರ. ಬ್ರಹ್ಮನು ವೇದಗಳನ್ನು ಪುನಃ ಪಡೆದು ಹದಿನಾಲ್ಕು ಲೋಕಗಳನ್ನೂ ಜೀವರಾಶಿಗಳನ್ನು ಸೃಷ್ಟಿಸಿದ ವಿಷಯ.

ತೃತೀಯ ಪರಿಚ್ಛೇದದಲ್ಲಿ ಶ್ರೀರಂಗ ವಿಮಾನವೃತ್ತಾಂತವನ್ನು ಕವಿ ವಿವರಿಸಿದ್ದಾನೆ.

ಬ್ರಹ್ಮನು ದೇವಲೋಕದಲ್ಲಿ ತನ್ನ ದಿವ್ಯಜ್ಞಾನದಿಂದ ಪ್ರಪಂಚದಲ್ಲಿ ಇಂದ್ರಾದಿ ದೇವತೆಗಳು ಎಲ್ಲಾ ಮಾನವರು ಕಾಲವಶದಿಂದ ನಾಶವನ್ನು ಅಪ್ಪುವರು ಎಂಬುವುದನ್ನು ಮನಗೊಂಡು ಮೋಕ್ಷಾಪೇಕ್ಷಿಯಾಗಿ ಶ್ರೀಮನ್ನಾರಾಯಣನನ್ನು ಕುರಿತು ತಪಸ್ಸು ಮಾಡತೊಡಗಿದನು. ಶ್ರೀಮನ್ನಾರಾಯಣನು ಪ್ರತ್ಯಕ್ಷನಾಗಿ ಬ್ರಹ್ಮನಿಗೆ ಅಷ್ಟಾಕ್ಷರೀ ಮಂತ್ರವನ್ನು ಉಪದೇಶಿಸಿದನು. ಅದರಿಂದ ತನ್ನ ನಿಜರೂಪವನ್ನು ಕಾಣಬಹುದೆಂದು ತಿಳಿಸಿ ಮಾಯವಾದನು. ನಾರಾಯಣನ ಆದೇಶದಂತೆ ಬ್ರಹ್ಮನು ತಪಸ್ಸನ್ನು ಆಚರಿಸಿದನು. ಓಂ ನಮೋ ನಾರಾಯಣಾಯವೆಂಬ ಅಷ್ಟಾಕ್ಷರ ಮಂತ್ರದ ಮಹಿಮೆಯನ್ನು ಶ್ರೀಮನ್ನಾರಾಯಣನು ಬ್ರಹ್ಮನಿಗೆ ಉಪದೇಶಮಾಡುವ ಸಂದರ್ಭದಲ್ಲಿ ಕವಿ ತನ್ನ ಸುಲಲಿತ ಭಾಷೆಯಲ್ಲಿ.

"ಓಂ ನಮೋ ನಾರಾಯಣಾಯಯೆಂಬ ಅಷ್ಟಾಕ್ಷರ ಮಂತ್ರಮಂ ನಿತ್ಯವು ಜಪಿಸು, ನಿನ್ನಭೀಷ್ಟ ಸಿದ್ಧಿಯಂ ಶ್ರೀಘ್ರದಲ್ಲಿ ಪಡೆಯಲುಳ್ಳವಂ. ಈ ಮಂತ್ರಾನುಸಂಧಾನ ಬಲದಿಂ ಮುಕ್ತಿ ಪ್ರಾಯನಾಗಿ ನನ್ನ ರೂಪಮಂ ನೋಡಲು ಯೋಗ್ಯನಾಗುತ್ತಿದ್ದೆ. ವೇದಂಗಳಲ್ಲಿ ಶ್ರೀ ಪಂಚರಾತ್ರಾದಿನಗಳಲ್ಲಿಯ ಉಕ್ತಂಗಳಾದ ಮಂತ್ರಂಗಳೊಳಗೆ ಈ ಅಷ್ಟಾಕ್ಷರ ಮಂತ್ರವೆ ಸಾರಭೂತವದರಿಂ ಮೂಲಮಂತ್ರವೆನಿಸಿತ್ತು." ಕವಿ ಮುಂದೆ ಪ್ರಣವದ ಮಹತ್ತು, ನಾರಾಯಣ ಪದದ ಅರ್ಥ, ಪ್ರಾಪ್ಯಪ್ರಾಪಕ ಪ್ರಾಪ್ತ ಫಲ ಸ್ವರೂಪಲಕ್ಷಣಗಳುಳ್ಳ ಅರ್ಥ ಪಂಚಕವನ್ನು ವಿವರಿಸಿ ಮುಮುಕ್ಷುಗಳಿಗೆ ಮೋಕ್ಷಕ್ಕೆ ಹೃಷೀಕೇಶನ ನಾಮಸ್ಮರಣೆ ಅಗತ್ಯವೆಂದು ತಿಳಿಸಿ, ಬ್ರಹ್ಮನು ಸಾವಿರ ವರ್ಷ ಅಷ್ಟಾಕ್ಷರೀ ಮಂತ್ರ ಉಚ್ಚಾರಣೆ ಮಾಡುತ್ತಿರಲು ಶ್ರೀರಂಗವಿಮಾನವು ಆವಿರ್ಭವಿಸಿತು. ಎಂಬುವುದಾಗಿ ತಿಳಿಸಿದ್ದಾನೆ. ಬ್ರಹ್ಮಾಂಡಪುರಾಣದಲ್ಲಿ ಕೂಡ--

ತಸ್ಯವರ್ಷ ಸಹಸ್ರಾಣಾಂ
ತಪ್ಯ ಮಾನಸ್ಯ ವೇಧಸಃ
ಆವಿರಾಸೀತ್ ಮಹದ್ಧಾಮ
ಶ್ರೀರಂಗಂ ಕ್ಷೀರಸಾಗರಾತ್

ಹೀಗೆಂದು ವ್ಯಕ್ತವಾಗಿದೆ. ಶ್ರೀರಂಗ ವಿಮಾನವು ಆವಿರ್ಭಾವ ವರ್ಣನೆ ಅದೇ ಪುರಾಣದಲ್ಲಿ--

ಜಿತಂತ ಇತಿ ಶಬ್ದೇನ
ಪೂರಯಾಮಾಸ ಅಂಬರಂ
ದೇವ ದುಂದುಭಯೋನೇಚುರ್ನ
ನೃತುಶ್ಚಾಪ್ಸರೋಗಣಾಃ
ಮುಮುಚುಃ ಪುಷ್ಪ ವೃಷ್ಟಿಶ್ಚ
ಪುಷ್ಕಲಾವರ್ತಕಾದಿಭಃ
ಆಗತಂ ರಂಗ ಧಾಮೇತಿ
ಶುಶ್ರುವೇ ಕಾಹಳಧ್ವನಿಃ
ದಿವ್ಯಂ ವಿಮಾನಂ ತತ್ ದೃಷ್ಟ್ವಾ
ಸ್ವಯಂ ವ್ಯಕ್ತಂ ಮಹರ್ದ್ಧಿಮತ್

ಈ ಭಾಗವನ್ನೇ ಚಿಕುಪಾಧ್ಯಾಯನು ತನ್ನ ಕಾವ್ಯದಲ್ಲಿ ಆ ಸಮಯದೊಳು ದೇವದುಂದುಭಿಗಳ್ ಮೊಳಗಿದವು. ಅಪ್ಸರಸೆಗಳು ನೃತ್ಯಮನಾಡಿದರು. ಪುಷ್ಕಳಾವರ್ತಾದಿ ಮೇಘಂಗಳು ಪುಷ್ಪವೃಷ್ಟಿಗಳಂ ಕರೆದವು. ಶ್ರೀರಂಗವಿಮಾನಂ ಬಂದುದೆಂದು ಕಾಹಳೆಗಳು ಮೊಳಗಿದವು. ಇಂತಹ ಶ್ರೀರಂಗವಿ

ಮಾನವನ್ನು ಕಂಡ ಬ್ರಹ್ಮನು ನಾಲ್ಕು ವೇದಗಳಿಂದ ಸ್ತೋತ್ರಮಾಡಿದನು. ನಾರಾಯಣನು ಬ್ರಹ್ಮನಿಗೆ ಅದನ್ನು ಪೂಜಿಸುವ ವಿಧಾನವನ್ನು ವಿವರಿಸಿದನು. ನಾರಾಯಣನು ತನಗೆ ಶಾಶ್ವತ ಮತ್ತು ಪಾಷ್ಕರಗಳೆಂಬ ಸಂಹಿತೆಗಳು ಶ್ರೇಷ್ಠವೆಂದೂ ತನಗೆ ದ್ವಾದಶಾಕ್ಷರ ಮಂತ್ರವೇ ಪ್ರಿಯವೆಂದೂ ರಂಗನಾಥನ ಪೂಜೆಯೇ ಶ್ರೇಷ್ಠವೆಂದು ಉಪದೇಶಮಾಡಿದನು. ತರುವಾಯ ಬ್ರಹ್ಮನು ಶ್ರೀರಂಗವಿಮಾನವನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ಸತ್ಯಲೋಕ್ಕೆ ಹೋದನು. ಆ ವಿಮಾನವನ್ನು ವಿರಜಾನದಿ ಹತ್ತಿರ ಸ್ಥಾಪಿಸಿ ಶ್ರೀರಂಗನಾಥನನ್ನು ಪ್ರತಿನಿತ್ಯವೂ ಭಕ್ತಿಯಿಂದ ಪೂಜಿಸುತ್ತಿದ್ದನು. ಬ್ರಹ್ಮನು ತರುವಾಯ ಸೂರ್ಯನಿಗೆ ದಿವ್ಯ ವಿಮಾನವನ್ನು ದರ್ಶನ ಮಾಡಿಸಿ, ಆತನಿಗೆ ಪಾಂಚರಾತ್ರ ಶಾಸ್ತ್ರವನ್ನು ಉಪದೇಶಿಸಿದನು. ಸೂರ್ಯನು ಆ ವಿಮಾನವನ್ನು ಹಲವು ವರ್ಷ ಪೂಜಿಸುತ್ತಿದ್ದನು. ಸೂರ್ಯನು ತರುವಾಯ ಶ್ರೀರಂಗ ರಹಸ್ಯವನ್ನು ಮನುವಿಗೆ ಉಪದೇಶಿಸಿದನು. ಈ ವಿಮಾನವನ್ನು ಪಡೆಯಲು ಆತನ ಮಗನಾದ ಇಕ್ಷ್ವಾಕು ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತಾ ತಪಸ್ಸನ್ನು ಆಚರಿಸಿದನು.

ಇಕ್ಷ್ವಾಕುವಿನ ತಪಸ್ಸನ್ನು ಕೆಡಿಸಲು ಇಂದ್ರನು ಪ್ರಯತ್ನಪಟ್ಟು ಭಗ್ನಮನೋರಥನಾದ ಅವನು ತನ್ನ ವಜ್ರಾಯುಧದಿಂದ ಕೊಲ್ಲಲು ಹೋದನು. ಆಗ ಇಕ್ಷ್ವಾಕು ಮಹಾರಾಜನು ಶ್ರೀಮನ್ನಾರಾಯಣನ ಚಕ್ರವನ್ನು ಸ್ಮರಣೆಮಾಡಿದನು. ವಜ್ರಾಯುಧವು ಚಕ್ರಾಯುಧದಿಂದ ಪರಾಭವಗೊಂಡಿತು. ಇಂದ್ರನು ಈ ವಿಷಯವನ್ನು ಬ್ರಹ್ಮನಿಗೆ ತಿಳಿಸಿದನು. ಶ್ರೀರಂಗವಿಮಾನವು ಸತ್ಯಲೋಕದಿಂದ ಕೈಬಿಟ್ಟು ಹೋಗುವುದೆಂದು ಭಯಗೊಂಡು ಬ್ರಹ್ಮನು ನಾರಾಯಣನನ್ನು ಮೊರೆಹೊಕ್ಕನು. ಆಗ ಶ್ರೀಮನ್ನಾರಾಯಣನು ತಾನು ಅಯೋಧ್ಯಾಪಟ್ಟಣಕ್ಕೆ ಹೋಗಿ ನಿಶ್ಚಯಿಸಿರುವೆನೆಂಬುವುದಾಗಿಯೂ, ಅಲ್ಲಿ ಹದಿನಾಲ್ಕು ಯುಗಗಳು ಪೂಜೆಯನ್ನು ಸ್ವೀಕರಿಸಿ ತಾನು ತರುವಾಯ ಕಾವೇರಿ ತೀರದಲ್ಲಿರುವ ಚಂದ್ರ ಪುಷ್ಕರಿಣಿ ತಟಿಯಲ್ಲಿ ನೆಲೆಸುತ್ತೇನೆ ಎಂಬುವುದಾಗಿ ತಿಳಿಸಿದನು. ಶ್ರೀಮನ್ನಾರಾಯಣನ ಆಜ್ಞೆಯಂತೆ ಬ್ರಹ್ಮನು ವಿಮಾನವನ್ನು ಇಕ್ಷ್ವಾಕು ಮಹಾರಾಜನಿಗೆ ನೀಡಿದನು. ಇಕ್ಷ್ವಾಕು ಆ ವಿಮಾನವನ್ನು ಸರಯೂನದೀ ತೀರದಲ್ಲಿ ಸ್ಥಾಪಿಸಿದನು. ಸೂರ್ಯ ವಂಶದ ಚಕ್ರವರ್ತಿ ಅಶ್ವಮೇಧಯಾಗವನ್ನು ಆಚರಿಸಿದನು. ಭರತಖಂಡದ ಎಲ್ಲಾ ರಾಜರು ಅದರಲ್ಲಿ ಭಾಗವಹಿಸಿದ್ದರು.

ಅಷ್ಟಮ ಪರಿಚ್ಛೇದದಲ್ಲಿ ಚಿಕುಪಾಧ್ಯಾಯನು ಆ ಸನ್ನಿವೇಶವನ್ನು ಬರೆಯುತ್ತಾ "ದಶರಥನಿಂ ಕರೆಯಲ್ಪಟ್ಟ ಚೋಳ ವಂಶೋತ್ಪನ್ನನಾದ ಮಹಾಧರ್ಮಿಷ್ಠನಾದ ಧರ್ಮವರ್ಮನೆಂಬ ಧರಣೀ ಪಾಲಕನುಂ ಎಯ್ದಿದಂ. ಬಳಿಕಾರಾಯಂ ಅಯೋಧ್ಯಾ ನಗರದ ಧನ ಸಮೃದ್ಧಿಯಂ ಭಗವತ್ ಪೂಜಾ ವಿಧಾನಮಂ ಯಜ್ಞ ಸಂಪದಮಂ ನೋಡಿಂತು ಯೋಚಿಸಿದಂ. ಇಕ್ಷ್ವಾಕು ವಂಶ ನೃಪಂ ತಪೋಮಹಿಮೆಯಿಂ ರಂಗ ವಿಮಾನಮಂ ಪಡೆದಂತೆ ನಾನುಂ ತಪಂ ಗೈವೆಂ" ಹೀಗೆ ಧರ್ಮವರ್ಮನೆಂಬ ಚೋಳರಾಜನು ಈ ರಂಗನಾಥನನ್ನು ತನ್ನ ರಾಜ್ಯಕ್ಕೆ ಕೊಂಡೊಯ್ಯಲು ನಿಶ್ಚಯಿಸಿ ಆ ದೇವರನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ಆಗ ಸಪ್ತರ್ಷಿಗಳೂ ದೇವತೆಗಳೂ ರಾಜನ ಬಳಿಗೆ ಬಂದು ತಪಸ್ಸನ್ನು ನಿಲ್ಲಿಸದೇಕೆಂದೂ ಮುಂದೆ ರಂಗನಾಥನೇ ದಕ್ಷಿಣ ದೇಶಕ್ಕೆ ಬರುವನೆಂದು ಭರವಸೆಯನ್ನು ಕೊಟ್ಟರು. ಮುಂದೆ ದಶರಥನ ತರುವಾಯ ಶ್ರೀರಾಮನು ರಾವಣ ಸಂಹಾರ ಮಾಡಿದ ಮೇಲೆ ಅಯೋಧ್ಯೆಗೆ ಹಿಂತಿರುಗಿದಾಗ ಪಟ್ಟಾಭಿಷೇಕ ತರುವಾಯ ವಿಭೀಷಣನಿಗೆ ಶ್ರೀರಾಮನು ತನಗೆ ವಂಶ ಪಾರಂಪರ್ಯವಾಗಿ ಬಂದಿದ್ದ ಪ್ರಣವ ವಿಮಾನವನ್ನು ಶ್ರೀರಂಗನಾಥನ ವಿಗ್ರಹವನ್ನು ಪ್ರೀತಿಯ ಉಡುಗರೆಯಾಗಿ ನೀಡಿದನು. ಆ ಕಾಣಿಕೆಯೊಡನೆ

ವಿಭೀಷಣನು ಅಯೋಧ್ಯೆಯನ್ನು ಬಿಟ್ಟು ಲಂಕೆಗೆ ಪ್ರಯಾಣ ಮಾಡಿದನು. ಕಾವೇರಿತೀರಕ್ಕೆ ಬಂದಾಗ ಮಧ್ಯಾಹ್ನ ಸಮಯವಾಯಿತು. ದೇವರನ್ನು ಚಂದ್ರ ಪುಷ್ಕರಿಣೀ ತೀರದಲ್ಲಿ ಇರಿಸಿ ಪೂಜೆಯನ್ನು ಮಾಡಿದನು. ಆಗ ಅಲ್ಲಿಗೆ ಧರ್ಮವರ್ಮ ಮಹಾರಾಜನು ಬಂದು ಶ್ರೀರಂಗನಾಥನನ್ನು ಭಕ್ತಿಯಿಂದ ಆರಾಧಿಸಿದನು. ಸ್ವಾಮಿಗೆ ವಿಜೃಂಭಣೆಯಿಂದ ಉತ್ಸವಾದಿಗಳು ನೆರವೇರಿದವು. ತರುವಾಯ ವಿಭೀಷಣನನು ಶ್ರೀರಂಗ ವಿಮಾನವನ್ನೂ ದೇವರ ವಿಗ್ರಹದ ಸಂಪುಟವನ್ನೂ ಎತ್ತಿ ತನ್ನ ತಲೆಯ ಮೇಲೆ ಇಟ್ಟುಕೊಳ್ಳಲು ಎಷ್ಟು ಪ್ರಯತ್ನ ಪಟ್ಟರೂ ಚಂದ್ರ ಪುಷ್ಕರಿಣೀ ತೀರದಲ್ಲಿ ಸ್ಥಾಪಿತವಾದ ವಿಮಾನ ಕದಲಲಿಲ್ಲ. ಆಗ ವಿಭೀಷಣನು ಬಹಳ ದುಃಖಿತನಾದನು. ಅವನ ದುಃಖವನ್ನು ಕಂಡ ರಂಗನಾಥನು ವಿಭೀಷಣನನ್ನು ಕುರಿತು ತಾನು ಅಲ್ಲಿಯೇ ನೆಲೆಸಲು ಇಚ್ಛೆ ಪಡೆಯುವೆನೆಂದು ತಿಳಿಸಿ, ಹಿಂದೆ ಗಂಗೆ ಕಾವೇರಿಯರ ಮಧ್ಯೆಯಾರು ಶ್ರೇಷ್ಠರು ಎಂಬ ವಿವಾದ ತಲೆತೋರಿದಾಗ ಶ್ರೀ ರಂಗನಾಥನು ಕಾವೇರಿಗೆ ತಾನು ದಕ್ಷಿಣದಲ್ಲಿ ಬಂದು ನೆಲೆಸುವೆನೆಂದೂ ಅಂದಿನಿಂದ ಗಂಗೆಗಿಂತ ಕಾವೇರಿ ಶ್ರೇಷ್ಠಳು ಎಂಬುವುದಾಗಿ ವರವನ್ನಿತ್ತ ಪ್ರಸಂಗ ತಿಳಿಸಿ ಆ ವರದ ಫಲಕಾಲ ಈಗ ಸನ್ನಿಹಿತವಾಗಿದೆ. ನೀನೂ ರಾತ್ರಿ ಸಮಯ ತನ್ನನ್ನು ಪೂಜಿಸಿ ಕೃತಾರ್ಥನಾಗು ಎಂಬುವುದಾಗಿ ತಿಳಿಸಿದಾಗ, ವಿಭೀಷಣನು ಶ್ರೀರಂಗನಾಥನನ್ನು ಅಲ್ಲಿಯೇ ಬಿಟ್ಟು ಹಿಂತಿರುಗಿದನು. ಇದ್ದ ಸ್ಥಳದಲ್ಲಿಯೇ ದೇವರನ್ನು ಪ್ರತಿಷ್ಠಾಪಿಸಿ ರಾಜನು ಒಂದು ದೇವಸ್ಥಾನವನ್ನು ಕಟ್ಟಿಸಿದನು. ಹೀಗೆ ಶ್ರೀರಂಗನಾಥನು ಅಯೋಧ್ಯೆಯಿಂದ ಕಾವೇರಿ ತೀರಕ್ಕೆ ಯಾತ್ರೆ ಬೆಳೆಸಿದನು. ಅವನು ನೆಲೆಸಿದ ಈ ಕ್ಷೇತ್ರವೇ ಶ್ರೀರಂಗವಾಯಿತು. ಅಂದು ದೇವರ ಪ್ರತಿಷ್ಠೆ ಮಾಡಿದ ದಿನವು ಫಾಲ್ಗುಣ ಮಾಸದ ಉತ್ತರ ಫಲ್ಗುಣಿಯ ದಿನ. ಆ ದಿನವೇ ಇಂದಿಗೂ ಶ್ರೀರಂಗದಲ್ಲಿ ಬ್ರಹ್ಮರಥೋತ್ಸವ ನಡೆದುಕೊಂಡು ಬರುತ್ತಿದೆ. ಆ ಉತ್ಸವದಲ್ಲಿ ವಿಭೀಷಣನ ವಿಗ್ರಹಕ್ಕೂ ಪೂಜೆ. ರಂಗನಾಥನು ವಿಭೀಷಣನ ಭಕ್ತಿಗೆ ಮೆಚ್ಚಿ ನಿರಂತರವೂ ಲಂಕೆ ಕಡೆಗೆ ನೋಡುತ್ತಾ ಮಲಗಿರುವುದಾಗಿ ಅಭಯವಿತ್ತು ಆಗೆಯೇ ಪವಡಿಸಿರುತ್ತಾನೆ.

ಹತ್ತನೆಯ ಪರಿಚ್ಛೇದದಲ್ಲಿ ಕವಿ ಶ್ರೀರಂಗದಲ್ಲಿ ಇರುವ ತೀರ್ಥಗಳ ವರ್ಣನೆ ಅದರ ಮಹಿಮೆಯನ್ನು ವರ್ಣಿಸುತ್ತಾನೆ.

"ಶ್ರೀರಂಗಯಾತ್ರೆ ಚಂದ್ರ ಪುಷ್ಕರಿಣೀ ತೀರ್ಥ ಸ್ನಾನಮುಂ ಮನುಜರ ಸರ್ವಾರಿಷ್ಟಗಳಂ ನಿವಾರಿಪುದು. ಪೂರ್ವದಲ್ಲಿ ದಕ್ಷಬ್ರಹ್ಮನ ಶಾಪದಿಂ ಷೋಡಶಕಲೆಗಳುಂ ಪೋಗಿ ನಿಸ್ತೇಜಸ್ಕನಾದ ಚಂದ್ರಂ, ಚಂದ್ರ ಪುಷ್ಕರಿಣಿಯಲ್ಲಿ ಸ್ನಾನಮಂ ಮಾಡಿದ ಮಾತ್ರದಿಂದಲೆ ತೇಜೋಮಯನಾದಂ"

ಆ ಕಾರಣದಿಂದಲೇ ಈ ತೀರ್ಥಕ್ಕೆ ಚಂದ್ರಪುಷ್ಕರಿಣೀತೀರ್ಥವೆಂದು ಪ್ರಸಿದ್ಧವಾಯಿತು. ವಾಸುದೇವನೆ ದೇವತೆ, ವೇದವ್ಯಾಸರೇ ಋುಷಿ, ಪುಷ್ಕರ ಪುಷ್ಕರಾಕ್ಷ, ಕುಮುದ ಮತ್ತು ಕಾಲ ಎಂಬುವರು ತೀರ್ಥರಕ್ಷಕರು. ಆ ತೀರ್ಥದಲ್ಲಿ ಸ್ನಾನಮಾಡುವಾಗ ಮೊದಲು ಗಣಪತಿಗೆ ನಮಸ್ಕರಿಸಬೇಕು. (ಕಾರಣ ವಿಭೀಷಣನು ಲಂಕೆಗೆ ಹೋಗುತ್ತಿದ್ದಾಗ ರಂಗ ವಿಮಾನವನ್ನು ನೋಡಿಕೊಳ್ಳಲು ಕಾವೇರಿ ತೀರದಲ್ಲಿ ಬಾಲ ವೇಷದಲ್ಲಿದ್ದ ಗಣಪತಿಗೆ ಒಪ್ಪಿಸಿ ಸ್ನಾನಮಾಡಲು ಹೋಗಿದ್ದ)

ಚಂದ್ರ ಪುಷ್ಕರಿಣೀ ಸ್ನಾನಂ
ಸರ್ವ ಪಾಪ ಪ್ರಣಾಶನಮ್
ಚಂದ್ರ ಪುಷ್ಕರಿಣೀ ಗಂಗಾಂ
ಸರ್ವತ್ರ ಪರಿಕೀರ್ತಯೇತ್

ಎಂಬುದು ಪುರಾಣ ಉಕ್ತಿ. ಈ ತೀರ್ಥದ ಪೂರ್ವದಲ್ಲಿ ಶುಕ್ರನ ಆದಿದೇವತೆಗೆ ಪ್ರೀತಿಕರವಾದ ಬಿಲ್ವತೀರ್ಥವಿದೆ. ಇಲ್ಲಿ ಬೆಳ್ಳಿ ಮತ್ತು ಚಿನ್ನ ದಾನ ಮಾಡುವವರ ಬ್ರಹ್ಮಹತ್ಯಾದೋಷ ಪರಿಹಾರವಾಗುತ್ತೆ. ಆಗ್ನೇಯದಲ್ಲಿ ಜಂಬೂತೀರ್ಥ, ದಕ್ಷಿಣದಲ್ಲಿ

ಅಶ್ವತ್ಥತೀರ್ಥ, ನೈರುತ್ಯದಲ್ಲಿ ಪರಾಶರತೀರ್ಥ, ಪಶ್ಚಿಮದಲ್ಲಿ ಪುನ್ನಾಗತೀರ್ಥ, ವಾಯುವ್ಯದಲ್ಲಿ ಬಕುಳ ತೀರ್ಥ, ಉತ್ತರ ಭಾಗದಲ್ಲಿ ಕದಂಬತೀರ್ಥ, ಈಶಾನ್ಯದಲ್ಲಿ ಆಮ್ರತೀರ್ಥ, ಎಲ್ಲಾ ತೀರ್ಥಗಳ ಸಂಗಮ. ಶ್ರೀರಂಗದ ರಂಗನಾಥಸ್ವಾಮಿಯನ್ನು ಕುರಿತು--

ಕಾವೇರಿ ವಿರಜಾತೋಯಂ
ವೈಕುಂಠಂ ರಂಗಮಂದಿರಂ
ವಾಸುದೇವೋ ರಂಗೇಶಃ
ಪ್ರತ್ಯಕ್ಷಂ ಪರಮಂ ಪದಮ್
ವಿಮಾನಂ ಪ್ರಣವಾಕಾರಂ
ವೇದ ಶೃಂಗಂ ಮಹಾದ್ಭುತಂ
ಶ್ರೀರಂಗ ಶಾಯೀ ಭಗವಾನ್
ಪ್ರಣವಾರ್ಥ ಪ್ರಕಾಶತಃ

ಪರಮಾತ್ಮನು ಸ್ವಯಂ ವ್ಯಕ್ತ ಸ್ಥಳಗಳಲ್ಲಿ ಶ್ರೀರಂಗವೂ ಒಂದು.

ಆದ್ಯಂ ಸ್ವಯಂ ವ್ಯಕ್ತ ಮಿದಂ
ವಿಮಾನಂ ರಂಗ ಸಂಜ್ಞಕಂ
ಶ್ರೀಮುಷ್ಣಂ ವೆಂಕಟಾದ್ರಿಂ ಚ
ಸಾಲಗ್ರಾಮಂಚ ನೈಮಿಶಂ
ತೋತಾದ್ರಿಂ ಪುಷ್ಕರಂ ಚೈವ
ನರ ನಾರಾಯಣಾಶ್ರಮಂ
ಅಷ್ಟಾ ಮೇ ಮೂರ್ತಯಃ ಸಂತಿ
ಸ್ವಯಂ ವ್ಯಕ್ತಾ ಮಹೀತಲೇ

ರಂಗಕ್ಷೇತ್ರದ ಮಹಿಮೆಯನ್ನು ಬ್ರಹ್ಮಾಂಡಪುರಾಣದಲ್ಲಿ--

ರಂಗಕ್ಷೇತ್ರ ಸಮಂ ಕ್ಷೇತ್ರಂ
ನ ಭೂತಂ ನ ಭವಿಷ್ಯತಿ
ನ ಚೇಹ ಮುತ್ರ ಲೋಕೇಷಂ
ರಂಗರಾಜ ಸಮೋಪಿ ಚ

ಎಂಬುವುದಾಗಿ ಕೊಂಡಾಡಿದ್ದಾರೆ. ದಶಮ ಪರಿಚ್ಛೇದದಲ್ಲಿ ಚಿಕುಪಾಧ್ಯಾಯನು ಶ್ರೀರಂಗ ವಿಮಾನದ ಎಂಟು ಆವರಣಗಳಲ್ಲಿ ಚಂಡ ಪ್ರಚಂಡ ಕುಮುದ ಕುಮುದಾಕ್ಷ ಧನಾಧ್ಯಕ್ಷರು ಆಯುಧಗಳಿಂದ ಸನ್ನದ್ಧರಾಗಿ ಸದಾ ಆವರಣಗಳಂ ರಕ್ಷಿಸುತಿಹರು. ಈ ಕಥೆಯಂ ಕೇಳಿದ ಬ್ರಾಹ್ಮಣನು ಶತ್ರುಗಳನ್ನು ಜಯಿಸುವನು. ಕ್ಷತ್ರಿಯನು ರಾಜ್ಯವನ್ನು ಪಡೆಯುವನು. ವೈಶ್ಯನು ಧನ ಸಂಪನ್ನನಾಗುತ್ತಾನೆ. ಶೂದ್ರನು ವಿಷ್ಣು ಭಕ್ತನಾಗುತ್ತಾನೆ. ಈ ಮಹಾತ್ಮಂ ಆವಂ ಕೇಳುತ್ತಿದ್ದಾನು. ಆವವಂ ಬರೆಯುತ್ತಿದ್ದಾನು, ಆವಾತಂ ಪಾಠವಂ ಮಾಡಿಕೊಂಡಿದ್ದಾನಾತಂ ಈ ಲೋಕದಲ್ಲಿ ಅನೇಕ ಸುಖಮಂ ಅನುಭವಿಸಿ ವಿಷ್ಣುಸಾಯುಜ್ಯಮನೆ ಪಡೆವನೆಂಬ ನಾರದಂಗೆ ಪರಮೇಶ್ವರಂ ಬೋಧಿಸುತ್ತಿರ್ದನೆಂಬ ಕಥಾಸಂಗತಿಯಂ ಸರ್ವಜನರ್ಗೆ ಸುಲಭಮಾಗಿ ತಿಳಿವಂತೆ ಕರ್ನಾಟಕ ಭಾಷಾ ರಚನೆಯಿಂ ಇದು ಸಕಲ ನೃಪಮಕುಟಮಣಿ ಗಣರುಚಿರುಚಿರ ಸದಮಳ ಪದಯುಗನಾದ ಚಿಕ್ಕದೇವ ಮಹಾರಾಜೇಂದ್ರ ಪ್ರೇರಿತ ಕರಿವರ ವರದ ಚರಣ ಸರಸಿಜ ಮಧುಕರಾಯಮಾನಾನೂನ ಕರ್ನಾಟಕ ಭಾಷ್ಯಕಾರ ಚಿಕುಪಾಧ್ಯಾಯ ವಿರಚಿತಮಪ್ಪ ಶ್ರೀರಂಗ ಮಹಾತ್ಮದೊಳ್ ದಶಮ ಪರಿಚ್ಛೇದಂ ಸಮಾಪ್ತಂ" ಎಂಬುವುದಾಗಿ ತನ್ನ ಕಾವ್ಯವನ್ನು ಪರಿಸಮಾಪ್ತಮಾಡುತ್ತಾನೆ.

ಶ್ರೀರಂಗನಾಥನನ್ನು ಕುರಿತು ಎಲ್ಲಾ ಆಳ್ವಾರರುಗಳು ತಮ್ಮ ಪಾಶುರಗಳಲ್ಲಿ ಸ್ತೋತ್ರಮಾಡಿದ್ದಾರೆ. ತೊಂಡರಡಿಪ್ಪಡಿ ಆಳ್ವಾರರು ಶ್ರೀರಂಗದಲ್ಲೇ ನೆಲೆಸಿ ತುಲಸೀ ತೋಟವನ್ನು ಬೆಳೆಸಿ ಪ್ರತಿನಿತ್ಯ ದೇವರಿಗೆ ಪುಷ್ಪ ಕೈಂಕರ್ಯವನ್ನು ಮಾಡುತ್ತಿದ್ದರು. ಅವರು ರಚಿಸಿದ ತಿರುಮಾಲಾದಿವ್ಯಪ್ರಬಂಧ, ಶ್ರೀರಂಗನಾಥನ ಸುಪ್ರಭಾತ ಶ್ರೀ ವೈಷ್ಣವರಿಗೆ ಆದರಣೀಯ, ತಿರುಪ್ಪಾಣಿ ಆಳ್ವಾರರು ತಮ್ಮ ಅಮಲನಾದ ಪಿರಾನ್ ಪ್ರಬಂಧದಲ್ಲಿ ಶ್ರೀರಂಗನ ನೋಡಿದ ಕಣ್ಣು ಮತ್ತೊಂದು ದೇವರನ್ನು ಕಾಣಲು ಇಚ್ಛಿಸುವುದಿಲ್ಲವೆಂದು ರಂಗನಾಥನನ್ನು ಕೊಂಡಾಡಿದ್ದಾರೆ. ಕುಲಶೇಖರರು ತಮ್ಮ ರಾಜ್ಯವನ್ನೇ ತೊರೆದು ಇಲ್ಲಿ ಬಂದು ನೆಲೆಸಿ ಕೈಂಕರ್ಯ ಮಾಡುತ್ತಾ ರಂಗ ಯಾತ್ರಾ ದಿನೇ ದಿನೇ ಎಂದು ಮುಕುಂದಮಾಲಾ ಸ್ತೋತ್ರ ರಚಿಸಿದರು. ತಿರುಮಂಗೈ ಆಳ್ವಾರರು ಶ್ರೀರಂಗನಾಥನ ದೇವಸ್ಥಾನದ ಪ್ರಾಕಾರಗಳನ್ನು ಕಟ್ಟಿಸಿದನು. ದಿವ್ಯಕ್ಷೇತ್ರಗಳಲ್ಲಿ ಶ್ರೀರಂಗಕ್ಕೆ ಮೊದಲನೆಯ ಸ್ಥಾನವನ್ನು ಆಳ್ವಾರುಗಳು ನಿಶ್ಚಯಿಸಿದರು. ಶ್ರೀರಾಮಾನುಜರು, ಸ್ವಾಮಿ ವೇದಾಂತ ದೇಶಿಕರು, ನಾಥಮುನಿ, ಯಾಮುನರು, ಪಿಳ್ಳೈ ಲೋಕಾಚಾರ್ಯರು ಮಣವಾಳಮಾಮುನಿಗಳು ಮುಂತಾದ ಎಲ್ಲಾ ಶ್ರೀವೈಷ್ಣವ ಆಳ್ವಾರ ಆಚಾರ್ಯರು ಇಲ್ಲಿ ಕಾಲಕ್ಷೇಪಮಾಡಿ ಕೃತಕೃತ್ಯರಾಗಿದ್ದಾರೆ. ಕೂರತ್ತಾಳ್ವಾರರ ಶ್ರೀರಂಗ ರಾಜಸ್ತವ ಹಾಗೂ ಶ್ರೀ ರಾಮಾನುಜರ ಶ್ರೀರಂಗ ಗದ್ಯ ಭಕ್ತಿ ಭಾವನೆಗಳಿಗೆ ನೀಡಿದ ಅನುಪಮ ಕಾಣಿಕೆಗಳು, ಗೋದಾದೇವಿ ಶ್ರೀ ರಂಗನಾಥನಲ್ಲಿ ಐಕ್ಯಳಾಗಿದ್ದು ಶ್ರೀರಂಗದಲ್ಲಿ. ಸ್ವತಃ ಶ್ರೀರಾಮರು ಪೂಜಿಸಿದ ಪೆರಿಯ ಪೆರುಮಾಳ್ ಈ ಶ್ರೀರಂಗನಾಥನು. ಈ ದಿವ್ಯ ಕ್ಷೇತ್ರವನ್ನು ಅಭಿವೃದ್ಧಿಪಡಿಸಲು ಸಪ್ತ ಪ್ರಾಕಾರಗಳನ್ನು ಕಟ್ಟಲು ಶ್ರಮಿಸಿದ ಚೋಳರಾಜರೆಲ್ಲಾ ಭಗವದ್ ಭಕ್ತರು. ಹಿಂದೆ ಕಂದಾಡೈ ರಾಮಾನುಜ ಅಯ್ಯಂಗಾರ್‌ರವರಿಂದ ಜೀರ್ಣೋದ್ಧಾರಮಾಡಿದ ಗೋಪುರವನ್ನು ಅಳಗಿಯ ಶಿಂಗರ್ ಆದಿವಣ್ ಶಠಗೋಪ ಮಹಾದೇಶಿಕರ್ (೪೪ ನೆಯ ಪೀಠಾದಿಪತಿಗಳು) ೨೩೬ ಅಡಿ ಎತ್ತರದ ಭವ್ಯ ಗೋಪುರವನ್ನು ಚಂದಾ ಎತ್ತಿ ತಮ್ಮ ೯೩ ವಯಸ್ಸಿನಲ್ಲಿ ಸಂಪೂರ್ಣಗೊಳಿಸಿ ಕುಂಭಾಭಿಷೇಕವನ್ನು ಮಾಡಿಸಿ ಕೃತಕೃತ್ಯರಾಗಿದ್ದಾರೆ. ಅಲ್ಲಿಗೆ ಹೋಗುವ ಪ್ರತಿಯೊಬ್ಬ ಭಾರತೀಯನು ಆ ಭವ್ಯ ಗೋಪುರವನ್ನು ನೋಡಿ ಮಂತ್ರಮುಗ್ಧನಾಗುತ್ತಾನೆ. ಶ್ರೀರಂಗಕ್ಷೇತ್ರದ ಮಹಿಮೆಯನ್ನು ಬ್ರಹ್ಮಾಂಡಪುರಾಣದಲ್ಲಿ--

ಶ್ರೀ ರಂಗೇಶಸ್ಯ ಸಾನ್ನಿಧ್ಯಂ
ಕಾವೇರ್ಯಾಂ ಭುವಿಸರ್ವದಾ
ನದಸ್ನಾನಾಚ್ಚ ದಾನಾಚ್ಚ
ಶಾಶ್ವತಂ ಪದಮಶ್ನುತೇ
ತಿಲ ತರ್ಪಣ ಮಾತ್ರೇಣ
ಪಿತ್ರೂನ್ ಉದ್ದಿಶ್ಯ ವೈಮುನೇ
ಸರ್ವಾನ್ ಕಾಮಾನವಾಪ್ನೋತಿ
ತದಕ್ಷಯ್ಯಾಯ ಕಲ್ಪತೇ

ಇಲ್ಲಿ ಸ್ನಾನಮಾಡಿ ದಾನಮಾಡಿದರೂ ಪಿತೃಗಳಿಗೆ ತಿಲತರ್ಪಣ ನೀಡಿದರೂ ಮನುಷ್ಯನು ಎಲ್ಲಾ ಕಾಮನೆಗಳನ್ನು ಪಡೆಯುತ್ತಾನೆ. ನಾವು ಪ್ರತಿನಿತ್ಯ ದೇವರ ಆರಾಧನೆಗಳಲ್ಲಿ ಪಠಿಸುವ ಕೊನೆಯ ಮಂತ್ರ--

ಮಂಗಳಂ ರಂಗನಾಥಾಯ
ಮಮ ನಾಥಾಯ ಮಂಗಳಂ
ಮಂಗಳಂ ಲೋಕನಾಥಾಯ
ಲಕ್ಷ್ಮೀ ನಾಥಾಯ ಮಂಗಳಂ

ಲಕ್ಷ್ಮೀ ಚರಣ ಲಾಕ್ಷಾಂಕ
ಸಾಕ್ಷೀ ಶ್ರೀ ವತ್ಸ ವಕ್ಷಸೇ
ಕ್ಷೇಮಂಕರಾಯ ಸರ್ವೇಷಾಂ
ಶ್ರೀರಂಗೇಶಾಯ ಮಂಗಳಂ

ಶ್ರೀರಂಗನಾಥ ಪರಬ್ರಹ್ಮಣೇ ನಮಃ



# ನಿಂದಾಸ್ತುತಿಯ ನಾಯಿಕಾಭಾವ

## (ಕುಲಶೇಖರ ಆಳ್ವಾರ್ ದಿವ್ಯಪ್ರಬಂಧದಲ್ಲಿ)

---ಎಂ. ಆರ್. ನರಸಿಂಹನ್.

ಕುಲಶೇಖರ ಆಳ್ವಾರ್ ಅವರ ಏಕೈಕ ದಿವ್ಯಪ್ರಬಂಧ 'ಪೆರುಮಾಳ್ ತಿರುಮೊಳಿ' ಯಲ್ಲಿ ಕಂಡುಬರುವ ನಾಯಿಕಾಭಾವವನ್ನು ಅವಲೋಕಿಸುವುದು ಭಕ್ತ ಜನಕ್ಕೆ ಆನಂದದಾಯಕವಾದದ್ದು.

ಪೆರುಮಾಳ್ ತಿರುಮೊಳಿಯಲ್ಲಿ ೧೦೫ ಪಾಶುರಗಳಿದ್ದು ಆರನೇದಶಕದ ಹತ್ತು ಪಾಶುರಗಳಲ್ಲಿ ನಾಯಿಕಾಭಾವದ ನಿರೂಪಣೆಯನ್ನು ನಾವು ಕಾಣುತ್ತೇವೆ. ಆದರೆ ಇವರ ನಿರೂಪಣಾಕ್ರಮ ಇತರ ಆಳ್ವಾರ್‌ಗಳಿಗಿಂತ ವಿಭಿನ್ನವಾಗಿದೆ. ಕುಲಶೇಖರರ ಶ್ಲೋಕದ ಹೆಣಿಗೆಯೂ ಕೂಡ ಬೇರೆ ರೀತಿಯದೇ. ನಾಯಕಿಯ ವಿರಹಾತಿಶಯ ದೆಶೆಯ ವರ್ಣನೆಯನ್ನು ನಾವು ಇದುವರೆಗೂ ನಾಯಕಿಯ ಮಾತಿನಲ್ಲೋ ಅಥವಾ ಆಕೆಯ ತಾಯಿಯ ಮಾತಿನಲ್ಲೋ ಕಂಡುಕೊಂಡೆವು. ಆದರೆ ಇಲ್ಲಿ ಅಂತಿಲ್ಲ. ನಾಯಕಿಯು ನಾಯಕನ ಮೇಲೆ ಕೋಪಗೊಂಡು ಅವನು ತನಗೆ ತೋರಿದ ಅಲಕ್ಷ್ಯಕ್ಕೆ ಅವನನ್ನು ಛೀಮಾರಿಹಾಕಿ ಕಳುಹಿಸುವ ಸಂವಿಧಾನವನ್ನು ನಾವಿಲ್ಲಿ ಕಾಣುವುದು. ಕುಲಶೇಖರರ ನಾಯಕಿ ನಾಯಕ ವಿಶ್ಲೇಷೆಯಿಂದ ಕೊರಗಿ ಅಳುತ್ತಾ ಕೂಡುವ ಕಾಮಿನಿಯಲ್ಲ. ಆದರೆ ಆಕೆ ಪ್ರತೀಕಾರವನ್ನು ಕೊಳ್ಳುವ ದಿಟ್ಟ ಕ್ಷತ್ರಿಯ ಕನ್ಯೆಯಂತೆ ತೋರಿಬಹುತ್ತದೆ. ಕುಲಶೇಖರರೂ ಕ್ಷತ್ರಿಯವಂಶಕ್ಕೇ ಸೇರಿದವರಲ್ಲವೆ? ಆದ್ದರಿಂದಲೇ ತಮ್ಮ ಕುಲಾಚಾರದ ಪ್ರಕಾರ ನಾಯಕಿಯ ಭಾವನೆಯನ್ನು ನಮಗೆ ಇಲ್ಲಿ ಕಾಣಿಸಿರುವುದು. ಅವರ ನಾಯಕಿಯ ವಿರಹದ ಭಾವಗಳನ್ನು ತಮ್ಮ ವಂಶದ ರೀತಿಯ ಅಳತೆಗೋಲಿನಿಂದಲೇ ತೋರಿಸಿದ್ದಾರೆ ಎನ್ನುವುದು ಸ್ಪಷ್ಟಪಡುತ್ತದೆ. ಏತಕ್ಕೆಂದರೆ ರಾಜನು ಬಹುವಲ್ಲಭೆಯರನ್ನು ಹೊಂದಿದ್ದಾನೆ. ಅವನು ಓರ್ವಳ ಅಂತಃಪುರಕ್ಕೆ ಹೋದರೆ ಇತರ ರಾಣಿಯರಿಗೆ ನಿರಾಸೆ, ಕೋಪ, ಆಕೆಯಮೇಲೆ ಈರ್ಷ್ಯಾಸೂಯೆ, ರಾಜನ ಮೇಲೆ ಸಾಮಯಿಕಜಿಹಾಸೆ ಉಂಟಾಗುವುದು ಸಹಜವಾದ ವ್ಯಾಪಾರವೇ ತಾನೆ! ಆತನೂ ಕೂಡ ಪ್ರತಿದಿನ, ಪ್ರತಿನಿಮಿಷಕ್ಕೆ ಒಬ್ಬೊಬ್ಬಳ ಸಂಗ ಸುಖವನ್ನು ಬಯಸಿ ಹೋಗುವುದು ನಾವು ರಾಜಮಹಾರಾಜರ ಚರಿತ್ರೆಗಳಿಂದಓದಿ ಕೇಳಿ ತಿಳಿದಿರುವ ವಿಚಾರವೇ! ಈ ಜಾಡಿನ ವಿಲಾಸ ವೈಭವವನ್ನು ಕುಲಶೇಖರರು ತಮ್ಮ ದಿವ್ಯ ಪ್ರಬಂಧದಲ್ಲಿ ಮೂಡಿಸಿದ್ದರೆ



ಆದರಲ್ಲಿ ಆಶ್ಚರ್ಯವೇನು! ಸಾಲದುದಕ್ಕೆ ಭಾಗವತದ ಕಥೆಯೂ ಇದಕ್ಕೆ ಪೂರಕವಾಗಿಯೇ ತಾನೇ ಇರುವುದು. ಕೃಷ್ಣನೂ ಕೂಡ ಹಲವು ಗೋಪಸ್ತ್ರೀಯರ ಜೊತೆ ಪ್ರಣಯ ಪ್ರಸಂಗ ನಡೆಸಿದ ವಿವರವೇ ತಾನೇ ಭಾಗವತ! ಜಾರಶಿಖಾಮಣಿಯಲ್ಲವೆ ಕೃಷ್ಣ! ಹೀಗಾಗಿ ಗೋಪಿಯರು ಅವನಿಗಾಗಿ ಹಂಬಲಿಸಿ, ಆತನು ಬೇರೆಯವಳೊಂದಿಗೆ ರಮಿಸಿದಾಗ ಕೋಪ, ಅಸೂಯೆ, ಕೃಷ್ಣನ ಮೇಲೆ ತಾತ್ಸಾರ ಹೊಂದುವುದನ್ನು ಕುಲಶೇಖರರು ದಿವ್ಯವಾಗಿ ತಮ್ಮ ತಿರುಮೊಳಿಯಲ್ಲಿ ವರ್ಣಿಸಿದ್ದರೆ ಅದರಲ್ಲಿ ಅತಿಶಯವೇನೂ ಇಲ್ಲ, ಅವರ ಕಲ್ಪನಾವಿಲಾಸ, ಸಾರಸ್ವತ ವೈಭವ, ಸಾಮಯಿಕ ಪ್ರಜ್ಞೆ ಇವುಗಳು ಮೆಚ್ಚತಕ್ಕದ್ದೇ.

ಕುಲಶೇಖರರೂ ಕೂಡ, ರಸಿಕರು, ಭಾವುಕರು, ಭಕ್ತಿ ಪಾರವಶ್ಯವುಳ್ಳವರು. ಅವರ ಭಕ್ತಿಯೂ ಕೂಡ ವಿಚಿತ್ರ ತರವಾದದ್ದು. ಒಂದು ರೀತಿಯ ವೈಪರಿತ್ಯವೇ. 'ಭಕ್ತನೊಬ್ಬನಿಗೆ ತಮ್ಮಿಂದ ತಮ್ಮ ಪರಿಜನರಿಂದ ಅಪಮಾನವಾಯಿತೆಂದು ನೊಂದು ಹಾವಿದ್ದ ಗಡಿಗೆಯೊಳಗೆ ಕೈಹಾಕಿ ಆತ್ಮ ಪರೀಕ್ಷೆ ಮಾಡಿಕೊಂಡ ಮಹಾನುಭಾವ ಈತ! ಮತ್ತೊಮ್ಮೆ ಪುರಾಣಿಕರೊಬ್ಬರು ರಾಮಾಯಣದ ಸೀತಾಪಹರಣ ಪ್ರಸಂಗವನ್ನು ಮನನೀಯವಾಗಿ ವರ್ಣಿಸುತ್ತಿದ್ದಾಗ ರಾಮಭಕ್ತರಾದ ಭಾವುಕ ಕುಲಶೇಖರರು ಮೇಲೆದ್ದು ಬಿಲ್ಲು ಬಾಣಗಳಿಂದ ಸುಸಜ್ಜಿತರಾಗಿ ಲಂಕೆಗೆ ಸೀತೆಯನ್ನೊಯ್ದ ಆ ರಾವಣನನ್ನು ಭಂಜಿಸದೇಕೆಂದು ಮುಂದಿದ್ದ ಸಮುದ್ರದಲ್ಲಿ ಕತ್ತಿನ ಮಟ್ಟಕ್ಕೂ ನೀರಲ್ಲಿಳಿದು ನಡೆದೇ ಬಿಟ್ಟರಂತೆ! ಇನ್ನು ಅವರ ಪ್ರಾಣಕ್ಕೇ ಸಂಚಕಾರವೆಂದು ರಾಮಚಂದ್ರನು ಸೀತಾಸಮೇತನಾಗಿ ದರ್ಶನವಿತ್ತು "ಇದೀಗ ರಾವಣನನ್ನು ನಿಗ್ರಹಿಸಿ ಸೀತೆಯೊಡನೆ ಹಿಂತಿರುಗುತ್ತಿದ್ದೇನೆ, ನೀವಿನ್ನು ನಿಶ್ಚಿಂತರಾಗಿ ತಿರುಗಿರಿ!" ಎಂದು ಸಮಾಧಾನಪಡಿಸಿದನಂತೆ! ಶ್ರೀರಂಗನಾಥನ ವೈಭವಕ್ಕೆ ಮರುಳಾಗಿ ಅವನನ್ನು ಅನನ್ಯವಾಗಿ ಸೇವಿಸದೇಕೆಂದು ಮಗನಿಗೆ ಪಟ್ಟಕಟ್ಟಿ ತಮ್ಮ ಶೇಷಾಯುಷ್ಯವನ್ನು ಶ್ರೀರಂಗದಲ್ಲೇ ಕಳೆದರೆಂದೂ ಒಂದು ಉಪಾಖ್ಯಾನ! ಇವರ ಈ ಭಕ್ತಿ ವೈಪರೀತ್ಯ ಭಾವನೆಗಳ ವೈವಿಧ್ಯ ವೈಚಿತ್ರ್ಯಗಳು ಇವರ ದಿವ್ಯ ಪ್ರಬಂಧಗಳಲ್ಲಿ ಪ್ರತಿಫಲಿಸಿವೆ! ಪೆರುಮಾಳ್ ತಿರುಮೊಳಿಯ ಮೊದಲದಶಕ 'ಊನೇರುಶಲ್ವತ್ತು' ಎಂಬುವ ದಶಕ, ಶ್ರೀರಾಮಚಂದ್ರನ ಲಾಲಿಯದಶಕ ಇವುಗಳಲ್ಲಿ ಅತ್ಯುಚ್ಚವಾದ ಭಾವನೆಗಳು ಹೊರಹೊಮ್ಮಿವೆ.

ನಾವೀಗ ಭಕ್ತಿ ಪಾರವಶ್ಯದಿಂದ ತುಂಬಿರುವ ಇವರ ನಾಯಿಕಾಭಾವದ ವಿವರಣೆಯನ್ನು ಆರನೆಯದಶಕದ ಹತ್ತು ಪಾಶುರಗಳ ಸಾರಾಂಶ ನಿರೂಪಣೆಯ ಮೂಲಕ ತಿಳಿಯುವ ಪ್ರಯತ್ನ ಮಾಡೋಣ.

ಪಾಪ! ಓರ್ವ ಗೋಪಿ ಕೃಷ್ಣನಿಗಾಗಿ ಹಂಬಲಿಸುತ್ತಾ, ಅವನ ಮಾರ್ಗವನ್ನು ಪ್ರತೀಕ್ಷೆಮಾಡಿ ವಾಸರಸಜ್ಜಿಕೆಯಾಗಿ ರಾತ್ರಿಪೂರ, ಅವನು ನಿರ್ದೇಶಿಸಿದ್ದ ಸಂಕೇತಸ್ಥಳದ ಒಬ್ಬಂಟಿಗಳಾಗಿ ನಿಂತು ಯಮುನಾನದಿಯ ಸೈಕತದ ಮೇಲೆ ಮಂಜು ಚಳಿಗಳಿಗೆ ಒಳಗಾಗಿ ಯಾರಾದರು ಕಂಡರೇನು ಮಾಡುವುದು ಎಂದು ಬೆದರಿ ಬೆಂಡಾಗಿ ಕೃಷ್ಣನು ಬಾರದೆ ಹೋಗಲು ನಿರ್ವಿಣ್ಣಳಾಗಿ ಬೆಳಕು ಹರಿದಾಗ ಮನೆಗೆ ಹಿಂತಿರುಗುತ್ತಾಳೆ. ಅಂದು ಕೃಷ್ಣನು ಅವಳ ಮನೆಗೆ ಬಂದು ಅವಳ ಸಂಗವನ್ನು ಅಪೇಕ್ಷಿಸಿದಾಗ ಆಕೆ ಗುಡುಗುತ್ತಾಳೆ-- "ಎಲೈ ವಾಸುದೇವಾ! ಹೂಗಳಿಂದ ಅಲಂಕೃತನಾಗಿ, ಪರಿಮಳ ಬೀರುವ, ಆಕರ್ಷಕ ಕೇಶಪಾಶವನ್ನು ಉಳ್ಳ ನಿನ್ನನ್ನು ಹಲವು

## ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎನ್. ರಮೇಶ್‌ಕುಮಾರ್,** ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,

**ಎನ್. ರಮೇಶ್‌ಕುಮಾರ್**

ಗೋಪಕನ್ನೆಯರು, ಆಲಂಗಿಸಿಕೊಳ್ಳಲು ಕಾತರಿಸುತ್ತಿರುವಾಗ ನನ್ನಲ್ಲಿಗೆ ತಾನೇ ಏತಕ್ಕೆ ಬರುತ್ತೀಯೆ? ನಾನು ನಿನ್ನನ್ನು ನಿರೀಕ್ಷಿಸಿ ಕಾದು ಕಲ್ಲಾಗಿ ಅವಮಾನದಿಂದ ವಾಪಸ್ಸು ಬಂದೆ. ಈಗ ತಾನೇ ಇಲ್ಲಿಗೆ ಏತಕ್ಕಾಗಿ ನೀನು ಬರಬೇಕು. ಹೋಗಿಬಿಡು, ನೀನು ಬಂದು ನನಗೆ ಉಂಟಾಗಿರುವ ನೋವನ್ನು ಹೆಚ್ಚಿಸದೇಡ ಹೊರಟುಹೋಗು" ಎಂದು ಕೃತಕರೋಷದಿಂದ ಮನೆಯ ಬಾಗಿಲನ್ನು ದಿಢೀರನೆ ಮುಚ್ಚುತ್ತಾಳಂತೆ!

ಮುಂದಿನ ಪಾಶುರದಲ್ಲಿ ಕೃಷ್ಣನು ಗೋಪಕನ್ನೆಗೆ "ನಾನು ಪ್ರೀತಿಸುವುದು ನಿನ್ನನ್ನೊಬ್ಬಳನ್ನೇ" ಎಂದು ಪ್ರಮಾಣದಿಂದ ನಂಬಿಸಲು ಪ್ರಯತ್ನಿಸಿದಾಗ ಆಕೆ ಆತನನ್ನು ಮೂದಲಿಸಿ ಮಾತನಾಡುತ್ತಾಳೆ "ನನಗೂ ಗೊತ್ತು ನೀನು ನನ್ನನ್ನೊಬ್ಬಳನ್ನೇ ಪ್ರೀತಿಸುತ್ತೀಯೆ" ಎಂಬುವುದು. ನಿನ್ನ ಕಮಲದ ಕಣ್ಣುಗಳಿಗೆ ಸದೃಶವಾದ ಮೀನ ಲೋಚನೆಯಾದ ಗೋಪಿಯೋರ್ವಳು ನಿನ್ನೆ ಮೊಸರನ್ನು ಕಡೆಯುತ್ತಾ ನಿಂತಿದ್ದಾಗ ನೀನು ಹೋಗಿ "ಪಾಪ ಮೊಸರು ಕಡೆದು ಕಡೆದು ಕೈಸೋತಿರುವುದು ನಿನ್ನ ಕಡೆಯುವ ಪರಿಯಿಂದಲೇ ತಿಳಿಯುತ್ತದೆ ನಾನು ನಿನಗೆ ಸಹಾಯಮಾಡಲೇ, ಬೇಗನೆ ಮೊಸರು ಕಡೆದು ಕೊಡುತ್ತೇನೆ" ಎಂದು ಮೃದುಮಾತುಗಳಿಂದ ಆಕೆಯನ್ನು ಬಲೆಗೆ ಹಾಕಿಕೊಂಡು ಅವಳ ಪಕ್ಕದಲ್ಲೇ ತಾಕುವಂತೆ ನಿಂತು ಅವಳ ಮತ್ತು ತನ್ನ ಮುಂಗುರುಳುಗಳು, ಸೀರೆ ಪೀತಾಂಬರಗಳ ಸೆರಗುಗಳು, ಮುಡಿಗಳು ತೋಳುಗಳು ಪರಸ್ಪರವಾಗಿ ತಾಗುವಂತೆ ನಿಂತಿದ್ದನ್ನು ಕಣ್ಣಾರೆ ನಾನೇ ಕಂಡಿದ್ದೇನೆ. ಇದು ಸುಳ್ಳೆ ನೀನೇ ಹೇಳು, ಈಗ ಬಂದು ಸುಳ್ಳು ಸಮಜಾಯಿಷಿಮಾಡುತ್ತೀಯಲ್ಲಾ ಹೋಗು" ಎಂದು ಮುಖದ ಮೇಲೆ ಮನೆಬಾಗಿಲು ಮುಚ್ಚುತ್ತಾಳೆ.

ಮುಂದಿನ ಪಾಶುರದ ಭಾವ ಇಂತಿದೆ. ಪುಷ್ಪಾಲಂಕೃತಳಾದ, ಕಪ್ಪು ಕುಂತಳದಿಂದ ಶೋಭಿಸುವ ಗೋಪಬಾಲಿಕೆಯೋರ್ವಳಿಗೆ ಕಣ್ಸನ್ನೆಯಿಂದ ತನ್ನ ಪ್ರಣಯೇಂಗಿತವನ್ನು ಸೂಚಿಸಿ ಮತ್ತೊರ್ವಳಿಗೆ 'ನಾನು ನಿನ್ನ ದಾಸಾನುದಾಸ'ನೆಂದು ವಚನ ನೀಡಿ, ಮಗದೊಬ್ಬಳಿಗೆ ಏಕಾಂತವಾಗಿ ಸೇರಲು ಸ್ಥಳ ನಿರ್ದೇಶಮಾಡಿ; ಅವಳು ಅಲ್ಲಿಗೆ ಬಂದ ಸಮಯಕ್ಕೆ ಸರಿಯಾಗಿ ಇನ್ನೊಬ್ಬಳನ್ನು ಆಲಂಗಿಸಿಕೊಂಡು, ಆಕೆಗೂ ಸುಳ್ಳು ಹೇಳುತ್ತಾ ಬಲೆಗೆ ಬೀಳಿಸಿಕೊಂಡ ಧೀರ ಯಮಳಾರ್ಜುನ ಭಂಜಕನಲ್ಲವೇ ನೀನು" ಎಂದು ವಿರಹದಿಂದ ದೆಂದು ತಲ್ಲಣಿಸುವ ಪ್ರಣಯ ವಿದಗ್ಧೆಯೋರ್ವಳ ಮಾತು ಅದರಲ್ಲಿದೆ. ಪ್ರತಿ ಪಾಶುರದಲ್ಲೂ ಮನೆಯ ಬಾಗಿಲಿಗೆ

ಬಂದ ಕೃಷ್ಣನನ್ನು ಅಟ್ಟುತ್ತಾ ಬಾಗಿಲು ಹಾಕಿಕೊಳ್ಳುವ ಗೋಪಿಯ ಚಿತ್ರವನ್ನು ನಾವು ಊಹಿಸಿಕೊಳ್ಳಬೇಕು.

ಓರ್ವಗೋಪಕನ್ನೆ ಕೃಷ್ಣನೊಂದಿಗೆ ಸಂಶ್ಲೇಷೆ ಹೊಂದಲು ಆಶಿಸಿ ದೂತಿಯೊಬ್ಬಳನ್ನು ಅವನನ್ನು ತನ್ನಲ್ಲಿಗೆ ಕರೆದು ತರಲು ಅಟ್ಟುತ್ತಾಳೆ. ಆದರೆ ಕೃಷ್ಣನೋ ಆ ದೂತಿಯ ಸೌಂದರ್ಯ ಸೌಕುಮಾರ್ಯಗಳಿಂದ ಆಕರ್ಷಿತನಾಗಿ ಆಕೆಯೊಡನೆಯೇ ಅವಳನ್ನು ಕಳುಹಿಸುತ್ತಾನೆ. ಅವಳ ಮೈಮೇಲಿನ ನಖಕ್ಷತ ದಂತಕ್ಷತಾದಿ ಚಿಹ್ನೆಗಳನ್ನು ಗಮನಿಸಿದ ಗೋಪಬಾಲೆಯು ಕೃಷ್ಣನನ್ನು ಹಂಗಿಸುತ್ತಾಳೆ. ಕೃಷ್ಣ ನಿನ್ನ ತಾಯಿಯು ಪ್ರೇಮಾತಿಶಯದಿಂದ ಚಿಕ್ಕಂದು ಮೊಲೆಯುಣ್ಣಿಸಲು ಬಂದಾಗ ಆಕೆಯ ವಾತ್ಸಲ್ಯವನ್ನು ಲೆಕ್ಕಿಸದೆ ಅವಳನ್ನು ನಿರಾಕರಿಸಿ ಅವಳ ಮಡಿಲಿಂದ ಜಾರಿ ನಿನ್ನನ್ನು ಕೊಲ್ಲಲು ಬಂದ ಮಾಯಾ ಪೂತನಿಯ ಮೊಲೆವಾಲನ್ನು ಆನಂದದಿಂದ ಲೊಟ್ಟೆಹಾಕಿಕೊಂಡು ಅತಿ ಪ್ರೀತಿಯಿಂದ ಕುಡಿದೆಯಲ್ಲವೆ? ಈಗ ಮಾಡಿದ ಕೆಲಸವೂ ಆ ಕೆಲಸವೂ ವ್ಯತ್ಯಾಸ ಹೊಂದಿರುವುದೇ ? ಇದೆಲ್ಲಾ ನಿನಗೆ ಅತಿ ಸಹಜವಾಗಿಯೇ ಬಂದಿರತಕ್ಕ ಗುಣವಿಶೇಷ, ವೈಖರಿ ತಾನೆ?

ಮಿಂಚಿನ ಬಳ್ಳಿಯಂತೆ ತೆಳುನಡುವಿಂದ ಬಾಗಿ ಬಳುಕುವ ಯುವತಿಯನ್ನು ಆಲಂಗಿಸಿಕೊಂಡು ಯಾರೂ ಕಾಣದಂತೆ ಪೀತಾಂಬರವನ್ನು ಮುಸುಗು ಹಾಕಿಕೊಂಡು ನಿನ್ನ ಪ್ರೇಮಿಯಾದ ನನ್ನ ಮನೆಯ ಮುಂದೆಯೇ ಹಾಡು ಹಗಲಿನಲ್ಲಿ ಹಾದುಹೋದೆಯಲ್ಲವೆ ? ನನಗೆ ತಿಳಿಯಲಿಲ್ಲವೇ ನಿನ್ನ ಈ ವ್ಯಾಪಾರ? ಹಾಗೆ ಹೋಗುವಾಗ ಕೂಡ ನಿನ್ನ ದೃಷ್ಟಿಗೆ ಬಿದ್ದ ಇನ್ನೊಬ್ಬ ಸುಂದರಿಯನ್ನು ಕಣ್ಣೋಟದಿಂದಲೇ ಆಕರ್ಷಿಸಿ ಇಂತಹ ಸ್ಥಳಕ್ಕೆ ಬಾ ಎಂದು ಸಂಜ್ಞೆಯ ಮೂಲಕ ತಿಳಿಸಿದ್ದು ನಾನು ಕಾಣಲಿಲ್ಲವೆ? ಹೋಗು ಹೋಗು ಅವರಹಿಂದೆಯೇ ಹೋಗು ಈಗೇತಕ್ಕೆ ಇಲ್ಲಿಗೆ ಬಂದೆ.

ಮಲ್ಲರ ಜೊತೆ ಸೆಣಸಲು ಸಿದ್ಧವಾದ ನಿಡುತೋಳನ್ನು ಹೊಂದಿರುವ ವಾಸುದೇವನೇ! ವಾಗ್ಯುದ್ಧದಲ್ಲಿ ನೀನು ನನ್ನನ್ನು ಖಂಡಿತ ಜಯಿಸಲಾರೆ! ನಿನ್ನ ಸಂಶ್ಲೇಷೆಗೆ ಆಶಿಸುವವರು ಹಲವರಿದ್ದಾರೆ ಎಂಬುವುದು ನನಗೂ ಮೊನ್ನೆಯೇ ತಿಳಿಯಿತು. ಏತಕ್ಕೆಂದರೆ ಮೊನ್ನೆ ನಿನ್ನ ಜೊತೆ ಸುಖವನ್ನು ಅನುಭವಿಸಿ ಮೈಮರೆತು ನಾನು ಮಲಗಿಬಿಟ್ಟೆ, ಮಧ್ಯೆ ರಾತ್ರಿಯಲ್ಲಿ ನಮ್ಮ ಶಯ್ಯೆಯನ್ನು ತೊರೆದು ಬೇರೊಬ್ಬಳಲ್ಲಿಗೆ ಹೋಗಿ ಅವಳನ್ನು ಕೂಡಿಕೊಂಡ ಮಹಾಪುರುಷ ನೀನಲ್ಲವೆ? ಮಾರನೆದಿನ ಮತ್ತೊಬ್ಬಳನ್ನು ಸೇರಿ ಮನಸ್ಥ ಲೀಲೆ ನಡೆಸಿದವನು. ನಾನೇಕೆ ಈಗ ಬೇಕಾಯಿತು. ಹೋಗು ಹೋಗು!

ಎರಡು ನಾಲಿಗೆಯ ಸರ್ಪದ ಮೇಲೆ ಮಲಗಿ ನಿನಗೂ ಎರಡು ನಾಲಿಗೆ ಉಂಟಾಗಿರಬೇಕು ಆಡುವುದೊಂದು, ಮಾಡುವುದೊಂದು ! ನೀನ್ನ ಮೋಸದ, ಬಣ್ಣದ ಮಾತಿಗೆ ನಾವಿನ್ನು ಮರುಳಾಗುವುದಿಲ್ಲ ತಿಳಿಯಿತೆ? ನೀನು ಆಸೆ ಪಡತಕ್ಕ ಸುಂದರ ದೇಹ ನಮಗೆ ಇಲ್ಲವೇನೋ? ಕಣ್ಣುಗಳಲ್ಲಿ ಸೊಬಗಿಲ್ಲವೇನೋ? ನಿನ್ನ ಸುಂದರ ಮುಕುಲ, ವದನಾರವಿಂದ, ಪಕ್ವ ಬಿಂಬಾಧರ, ಅಮೃತ ಪೂರಿತವಾದ ಬಾಯಿ, ಸೊಗಸಾಗಿ ಊದುವ ಕೊಳಲು - ಇವುಗಳಿಗೆ ಮರುಳಾಗಿ ನಿನ್ನ ಮಾತೂ ಕೂಡ ಅವುಗಳಂತೆಯೇ ಸತ್ಯಸುಂದರವೆಂದು ನಂಬಿ ಮೋಸಹೋದದ್ದಾಯಿತು. ಸಾಕು ನಿನ್ನಿಂದ ಅನುಭವಿಸಿದ ಸುಖ ನೀನಿನ್ನು ಇಲ್ಲಿಗೆ ಬರಬೇಡ ಹೋಗು.

ಒಂದು ಸಂಕೇತ ಸ್ಥಾನವನ್ನು ಸೂಚಿಸಿದ್ದೆ. ಅಲ್ಲಿಗೇ ನಾನೂ ಸಹ ಬಂದೆ. ಆದರೆ ಅಲ್ಲಿ ನಡೆದದ್ದೇನು ? ನೀನಾದರೋ ಆಗಲೇ ಒಬ್ಬ ಬಾಲೆಯೊಡನೆ ಸುಖಸಲ್ಲಾಪ ನಡೆಸುತ್ತಿದ್ದೆ. ನನ್ನನ್ನು ಕಂಡು ಭಯಗೊಂಡವನಂತೆ ಪೀತಾಂಬರವನ್ನು ಸೆಳೆದು ಸುತ್ತಿಕೊಳ್ಳುತ್ತಾ ಓಡಿ ಹೋಗುವವನಂತೆ ನಾಟಕವಾಡಿದೆ ಅಲ್ಲವೆ. ಮತ್ತೆಂದಾದರೂ ನನ್ನ ಜೊತೆ ಸಂಶ್ಲೇಷೆಗೆ ಬಂದು ಮರುಳು ಮಾತಾಡ್ತೀಯೆ ಅಲ್ಲವೆ. ಆಗ ನನಗೆ ಮುಖ ಕೊಟ್ಟು ಮಾತನಾಡುವವಳು ನಾನಲ್ಲ ತಿಳಿದುಕೋ. ಹೊರಟುಹೋಗು ನಿಲ್ಲಬೇಡ.

ಸೊಗಸಾದ ವನಮಾಲೆಯನ್ನು ವಕ್ಷಸ್ಥಳದಲ್ಲಿ ಧರಿಸಿ, ತಲೆಯಲ್ಲಿ ಬರ್ಹಿ ಪಿಂಛ ಸೇರಿಸಿ, ಸುಂದರ ಪೀತಾಂಬರಧಾರಿಯಾಗಿ ಹೂಗೊಂಚಲನ್ನು ಕರ್ಣಾಲಂಕಾರವೆಸಗಿಕೊಂಡು ಮಧುವನ್ನು ಸ್ರವಿಸುತ್ತಿರುವ, ದುಂಬಿಗಳಿಂದ ಮುತ್ತಲ್ಪಟ್ಟ ಹೂಗಳನ್ನು ಸಿಂಗರಿಸಿಕೊಂಡ, ಪರಿಮಳಭರಿತರಾದ ಕುಂತಳ ಕೇಶಿಯರೊಡನೆ ಸಂಶ್ಲೇಷ ನಡೆಸಿ ಅದರಿಂದಲುಂಟಾದ ಆನಂದೋದ್ರೇಕವನ್ನು ತಡೆದುಕೊಳ್ಳಲಾರದೆ ಇಂಪಾಗಿ ಕೊಳಲು ಬಾರಿಸಿದೆಯಲ್ಲ; ನನ್ನ ಮುಂದೆ ಎಂದಾದರೂ ಹಾಗೆ ಸೊಗಸಾಗಿ ಕೊಳಲನ್ನು ಒಮ್ಮೆಯಾದರೂ ಬಾರಿಸಿದೆಯ? ಪಾಪ ಪಾಪ ಆಗ ಕೊಳಲಿನಿಂದ ಇಂಪಾದ ನಾದವೇ ಹೊರಡುವುದಿಲ್ಲ ಅಲ್ಲವೆ?

ಮಂಗಳ ಶ್ಲೋಕದಲ್ಲಿ ಕುಲಶೇಖರರು ಕೇಸರಾಲಂಕೃತವಾದ ತಾಮರೆಯ ಪುಷ್ಪದೊಳಗೆ ಜನಿಸಿದ ಸಾಗರ ಕನ್ಯೆಯ ವಲ್ಲಭ ಕೃಷ್ಣನೊಡನೆ ಸಂಶ್ಲೇಷ ಸುಖವನ್ನು ಹೊಂದಲಾಶಿಸಿದ ಗೋಪಕನ್ನಿಕೆಯರು ಅವನು ಅವರನ್ನು ನಿರಾಶೆಗೊಳಿಸಲು ಪ್ರಣಯ ರೋಷದಿಂದ ಸಿಡಿಸಿದ ನುಡಿಗಳು ಹೀಗಿದ್ದವು ಎಂಬುದನ್ನು ಕೊಲ್ಲಿನಗರದ ರಾಜ ಕುಲಶೇಖರರು ಕೃತಿಸಿರುವ ಈ ಹತ್ತು ಪಾಶುರಗಳನ್ನು ಹಾಡುವವರಿಗೆ ಸಂಸಾರ ಕ್ಲೇಶ ಬಾಧೆಗಳು ಈದ್ರುಶವೂ ಇರುವುದಿಲ್ಲ ಎಂದು ಫಲಶ್ರುತಿ ಹಾಡಿದ್ದಾರೆ.

ಈ ರೀತಿಯ ಭಾವನಾವಿಲಾಸ ಬೇರಾವ ಆಳ್ವಾರ್‌ಗಳ ಪ್ರಬಂಧಗಳಲ್ಲಿಯೂ ನಾವು ಕಾಣಲಾರೆವು ಇವೇ ಒಂದು ಜಾತಿಗೆ ಸೇರಿದವು. ಪ್ರತ್ಯೇಕವಾಗಿ ನಿಲ್ಲತಕ್ಕವು. ಮೇಲಿನ ಪಾಶುರಗಳಲ್ಲಿ ಬಿಂಬಿಸಲ್ಪಟ್ಟ ಭಾವ ಒಬ್ಬಳೇ ಗೋಪಿಯದು ಎಂದು ಬೇಕಾದರೂ ನಾವು ಭಾವಿಸಿಕೊಳ್ಳಬಹುದು. ಅಥವಾ ಬೇರೆ ಬೇರೆ ಗೋಪಿಯರ ಮುಖದಿಂದ ಬಂದನೊಂದ ನುಡಿಗಳು ಎಂದು ಬೇಕಾದರೂ ಪರಿಗಣಿಸಬಹುದು.

ಇವೆಲ್ಲಾ 'ನಿಂದಾಸ್ತುತಿ' ಎಂಬ ಜಾತಿಗೆ ಸೇರಿದುವು. ಇವುಗಳಲ್ಲಿ ಭಗವನ್ನಿಂದೆಯನ್ನಲ್ಲ ನಾವು ಕಾಣಬೇಕಾದುದು, ಆದರೆ ಅವನು ಮಾಡಿದ ಲೀಲಾ ಚೇಷ್ಟೆಗಳ ವರ್ಣನೆ ಪ್ರಶಂಸೆ. ಇಂತಹ ಮಾತುಗಳಿಂದ ಭಗವಂತನು ಭಕ್ತನ ಮೇಲೆ ಕೋಪಗೊಳ್ಳದೆ ಪ್ರೀತನಾಗಿ ಅವನ ಮಾತಿಗೆ ಸಂತೋಷಿಸುವನೆಂದೇ ನಂಬಿಕೆ. ಚಿಕ್ಕಮಕ್ಕಳು ದೂರಿದರೆ ತಂದೆಯಾದವನು ಅದನ್ನೂ ಆನಂದದಿಂದ ತೆಗೆದುಕೊಳ್ಳುವಂತೆ ಆಂಡಾಳ್ ತಿರುಪ್ಪಾವೈನಲ್ಲಿ ಇದನ್ನೇ ಹೇಳುವುದು "ಅನ್ಬಿನಾಲ್ ಉನ್ ತನ್ನೈ ಚಿರಪೇರಳೈತ್ತನವುಂ ಶೀರಿ ಅರುಳಾದೇ" ಎಂದು "ನಿನ್ನ ಮೇಲಿನ ವಿಶ್ವಾಸದಿಂದ ಕಿರಿಯರಾದ ತಾವು ತಪ್ಪುತಪ್ಪಾಗಿ ಕಿರಿಯ ಮಾತುಗಳಿಂದ ನಿರ್ದೇಶಿಸಿರಬಹುದು ಕೋಪಿಸಬೇಡ. ನಮ್ಮನ್ನು ಅನುಗ್ರಹಿಸು" ಎಂದು ಅರ್ಥ. ಇದೂ ಭಕ್ತಿಪ್ರದರ್ಶನದ ಒಂದು ಮಜಲು.

ಇಲ್ಲಿ ಒಂದು ಮಾತ್ರ ತಿಳಿಯತಕ್ಕ ಅಂಶ......... ಇಲ್ಲಿ ಗೋಪಿ ನಾಯಿಕೆ, ಕೃಷ್ಣನ ವಿರಹದಿಂದ ನೊಂದವಳು. ವಿರಹಾತಿಶಯದ ನುತಿ ಹೃದಯದಿಂದ ಉಮ್ಮಳಿಸಿ ಹೊರಬಂದು ವಿಜೃಂಭಿಸಿದೆ. ಕೃಷ್ಣನ ಹೃದಯದ ಮೇಲೆ ಕತ್ತಿಯನ್ನೇ ಝಳುಪಿಸಿದೆ. ಅಷ್ಟೇ ನಮ್ಮನ್ನೂ ಸಹ ಪರವಶರನ್ನಾಗಿ ಮಾಡಿದೆ. ಭಾವುಕ ಪ್ರಪಂಚಕ್ಕೇ ಒಯ್ದಿದೆ. ರಸಸಮಾಧಿಸ್ಥಿತಿಗೆ ಸೇರಿಸಿದೆ. ಜೀವಾತ್ಮವು ಪರಮಾತ್ಮ ಪ್ರಾಪ್ತಿಗಾಗಿ ಹಂಬಲಿಸುವ ಅನ್ಯಾಪದೇಶ ರೂಪ ಇದು ಎಂಬುದಾಗಿ ಭಾವಿಸಲು ಅವಕಾಶವಿದೆ. ಕುಲಶೇಖರರ ಸಾಹಿತ್ಯನೀತಿ ಈ ರೀತಿ ಸಾಹಿತ್ಯ ವೈಭವದಿಂದ ವಿಜೃಂಭಿಸಿದೆ ಎಂದು ಹೇಳಿ 'ತಮಹಂ ಶಿರಸಾ ವಂದೇ ರಾಜಾನಾಂ ಕುಲಶೇಖರಂ' ಎಂದು ಕುಲಶೇಖರಾಳ್ವಾರ್ ಅವರಿಗೆ ಭಕ್ತಿಪೂರ್ವಕ ನಮನವನ್ನು ಅರ್ಚಿಸುತ್ತಾ ಪ್ರಕೃತದ ಲೇಖನ ಭಾಗಕ್ಕೆ ಮುಕ್ತಾಯ ಹಾಡುತ್ತೇನೆ.

ಇತಿಶಮ್



ಓಳ್ಳಿರಿ ಕೊಂಡು ಓದಿರಿ

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ

## ಮೇ 1996

1996 ರ ಮೇ ತಿಂಗಳಿನ ಸಪ್ತಗಿರಿಯಲ್ಲಿ ನೃಸಿಂಹ ಜಯಂತಿಯ ಪ್ರಯುಕ್ತವಾದ ಎರಡು ಬಹುಮುಖ್ಯ ಲೇಖನಗಳಿವೆ.

**ಸಿಂಹಾಚಲ ಕ್ಷೇತ್ರ :**

ಆಂಧ್ರಪ್ರದೇಶದಲ್ಲಿಯೇ ಅಲ್ಲದೆ ಇಡೀ ಭಾರತದಲ್ಲಿಯೇ ಹೆಸರಾದ ನರಸಿಂಹಸ್ವಾಮಿ ಆಲಯವಿರುವ ತೀರ್ಥಕ್ಷೇತ್ರವಿದು. ಇದರ ಇತಿಹಾಸ ಪುರಾಣಗಳನ್ನು ಸಾಹಿತ್ಯ ವೈವಿಧ್ಯಗಳನ್ನು ಪರಿಚಯ ಮಾಡಿಕೊಡುತ್ತಾರೆ - ಬೆಂಗಳೂರಿನ ಸಿ. ಗೋವಿಂದಾಚಾರ್ಯ.

**ನೀರಾನರಸಿಂಹ :**

ಆಂಧ್ರ ಕರ್ನಾಟಕ ಮಹಾರಾಷ್ಟ್ರಗಳ ಗಡಿಗಳ ಸಂಗಮದಲ್ಲಿ, ನೀರಾ ಭೀಮಾ ನದಿಗಳ ಸಂಗಮದಲ್ಲಿನ ನೀರಾ ನಾರಸಿಂಹ ಕ್ಷೇತ್ರ ತನ್ನದೇ ಆದ ವೈಶಿಷ್ಟ್ಯವನ್ನು ಇತಿಹಾಸದುದ್ದಕ್ಕೂ ಪ್ರಕಟಿಸುತ್ತ ಒಳ್ಳೆಯ ಪರಂಪರೆಯನ್ನು ಹೊಂದಿರುವ ಸ್ಥಳ. ಅದರ ವಿವರವನ್ನೊದಗಿಸಿದ್ದಾರೆ - ಬೆಂಗಳೂರಿನ ಆದ್ಯರಾಮಾಚಾರ್ಯ.

**ಶ್ರೀಭಾಷ್ಯದ ವ್ಯಾಖ್ಯಾನಗಳು :**

ವಿಶಿಷ್ಟಾದ್ವೈತಕ್ಕೆ ಆಚಾರ್ಯ ರಾಮಾನುಜರ ಕೊಡುಗೆ ಶ್ರೀ ಭಾಷ್ಯ. ಭಾರತೀಯ ತತ್ವಶಾಸ್ತ್ರದಲ್ಲಿಯೂ ಹಿರಿಯ ಗ್ರಂಥವೆಂದೇ ಕಾಲದಿಂದ ಕೊಂಡಾಟ ಪಡೆದು ಬಂದಿರುವ ಈ ಕೃತಿಗೆ ವ್ಯಾಖ್ಯಾನಗಳು ಹಲವಾರು. ಅವುಗಳ ಪರಿಚಯ ಮಾಡಿಕೊಡುತ್ತಾರೆ ಬೆಂಗಳೂರಿನ ವಿದ್ವಾಂಸ ರಘುಸುತ.

**ಭಜನಪದ್ಧತಿ :**

ಭಾಗವತ ಪಂಥದಲ್ಲಿ ಭಕ್ತಿಗೆ ಪ್ರಾಧಾನ್ಯವಿದ್ದಂತೆ ಭಕ್ತಿಯ ಅಭಿವ್ಯಕ್ತಿಯಲ್ಲಿ ಭಜನ ಪದ್ಧತಿಗೆ ಅಗ್ರತಾಂಬೂಲ. ಅದರ ಪರಿಯನ್ನು ಪರಿಪರಿಯಾಗಿ ಪ್ರಕಟಿಸಿರುವುದುಂಟು. ಮೈಸೂರಿನ ವಿದ್ವಾಂಸ ಡಾ|| ವಿ. ಎಸ್. ಸಂಪತ್ತುಕುಮಾರಾಚಾರ್ಯರು ಈ ಭಜನಪದ್ಧತಿಯ ಸುಳಿವು ಸೂಕ್ಷ್ಮಗಳನ್ನು ವಿವರಿಸಿದ್ದಾರೆ.

ಜೊತೆಗೇ ಮತ್ತೂ ಹಲವಾರು ಸಾಮಯಿಕ ಲೇಖನಗಳು ಸೇರಿ ಪ್ರಕಟವಾಗುವ ಸಪ್ತಗಿರಿಯನ್ನು ಬರಮಾಡಿಕೊಳ್ಳಿ ತಮ್ಮ ಮನೆಗೆ - ಮನಕ್ಕೆ

ಸಪ್ತಗಿರಿಯ ವಾರ್ಷಿಕ ಚಂದಾ ಏಪ್ರಿಲ್ 1996 ರಿಂದ ರೂ 48/- ಮಾತ್ರ. ಎಂ.ಓ. / ಡಿ.ಡಿ. ಗಳನ್ನು ಕಳುಹಿಸಬೇಕಾದ ವಿಳಾಸ - ಸಂಪಾದಕರು ಸಪ್ತಗಿರಿ, ತಿ.ತಿ.ದೇ. ತಿರುಪತಿ - 517 507

ಓದಿರಿ ಓದಿಸಿರಿ

## ತಿಂಗಳಿನ ಮುಖ್ಯದಿನಗಳು

### ಮೇ --- 1996

1 ಬುಧವಾರ :
ನೃಸಿಂಹ ಜಯಂತಿ.

2 ಗುರುವಾರ :
ನಾಗುಲಾಪುರದಲ್ಲಿ
ಶ್ರೀ ವೇದನಾರಾಯಣಸ್ವಾಮಿ
ಬ್ರಹ್ಮೋತ್ಸವಾರಂಭ.
ಮಧುರಕವಿ ಆಳ್ವಾರ್ ಶಾತ್ತುಮೊರೆ.

3 ಶುಕ್ರವಾರ :
ಅನ್ನಮಾಚಾರ್ಯ ಜಯಂತಿ.
ಕೂರ್ಮಜಯಂತಿ

6 ಸೋಮವಾರ :
ಶ್ರೀ ವೇದನಾರಾಯಣಸ್ವಾಮಿ
ಗರುಡೋತ್ಸವ.

9 ಗುರುವಾರ :
ಶ್ರೀ ವೇದನಾರಾಯಣಸ್ವಾಮಿ
ರಥೋತ್ಸವ.

10 ಶುಕ್ರವಾರ :
ಶ್ರೀ ವೇದನಾರಾಯಣಸ್ವಾಮಿ
ಬ್ರಹ್ಮೋತ್ಸವ ಸಮಾಪ್ತಿ.

12 ಭಾನುವಾರ :
ಹನುಮಜಯಂತಿ.

14 ಮಂಗಳವಾರ :
ತಿರುಪತಿಯಲ್ಲಿ
ಗಂಗಾಜಾತ್ರೆ.

22. ಬುಧವಾರ
ನಮ್ಮಾಳ್ವಾರ್ ಉತ್ಸವಾರಂಭ.

24 ಶುಕ್ರವಾರ
ತಿರುಪತಿಯ
ಶ್ರೀಗೋವಿಂದರಾಜಸ್ವಾಮಿ
ಬ್ರಹ್ಮೋತ್ಸವಾರಂಭ.

28 ಮಂಗಳವಾರ
ತಿರುಪತಿಯ
ಶ್ರೀಗೋವಿಂದರಾಜಸ್ವಾಮಿ
ಗರುಡೋತ್ಸವ.
ತಿರುಚಾನೂರಿನಲ್ಲಿ
ಶ್ರೀ ಪದ್ಮಾವತೀ ಅಮ್ಮನವರ
ತೆಪ್ಪೋತ್ಸವಾರಂಭ

29 ಬುಧವಾರ
ನಾರಾಯಣವನದಲ್ಲಿ
ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ
ಬ್ರಹ್ಮೋತ್ಸವಾರಂಭ.

31 ಶುಕ್ರವಾರ
ತಿರುಪತಿಯ
ಶ್ರೀ ಗೋವಿಂದರಾಜಸ್ವಾಮಿ
ರಥೋತ್ಸವ.
ನಮ್ಮಾಳ್ವಾರ್ ಶಾತ್ತುಮೊರೆ.

# ವಾರ್ತಾಲಹರಿ

## ಅನ್ನಮಯ್ಯ ವರ್ಧಂತಿ ಉತ್ಸವಗಳು

ಶ್ರೀ ವೆಂಕಟೇಶ್ವರ ಸ್ವಾಮಿಯನ್ನು 32 ಸಾವಿರ ಕೀರ್ತನೆಗಳಿಂದ ಸಂಸ್ತುತಿಸಿ ಧನ್ಯನಾದ ಜೀವಿ ತಾಳ್ಳಪಾಕ ಅನ್ನಮಾಚಾರ್ಯ. ಬಹುಳ ಜನಾದರಣೆಯನ್ನು ಹೊಂದಿದ ಆತನ ಕೀರ್ತನೆಗಳ ವ್ಯಾಪಕ ಪ್ರಸಾರಕ್ಕಾಗಿ 1978 ರಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ಉಂಟಾಗಿ ಅನ್ನಮಯ್ಯ ಸಾಹಿತ್ಯ ಸಂಗೀತ ಪ್ರಸಾರ ಕಾರ್ಯದೊಡನೆ ಆ ಮಹಾಕವಿಯ ನೆನಪನ್ನು ಹಸಿರಾಗಿರಿಸಲು ವರ್ಷಂಪ್ರತಿ ಆತನ ವರ್ಧಂತಿ ಜಯಂತಿ ಉತ್ಸವಗಳನ್ನೂ ನಡೆಸಿಕೊಂಡು ಬರುತ್ತಿದೆ. ಸಧ್ಯದ ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕರು ಡಾ|| ಮೇಡಸಾನಿ ಮೋಹನ್ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರ ಉತ್ಸಾಹ, ಆಸಕ್ತಿಗಳಿಂದಾಗಿ ಹಿಂದಿನ ವರ್ಷದಿಂದ ಈ ವರ್ಧಂತಿ ಜಯಂತಿಗಳು ಮತ್ತೂ ಹೆಚ್ಚು ವೈಭವದಿಂದ, ಹೆಚ್ಚು ಮಂದಿಯ ಭಾಗವಹಿಸುವಿಕೆಯಿಂದ ನಡೆದಿದ್ದು ಈ ಬಾರಿಯ ವರ್ಧಂತಿ ಉತ್ಸವಗಳು ಮಾರ್ಚ್ 16 ರಿಂದ (493 ನೇ ವರ್ದಂತಿ ಉತ್ಸವಗಳು) ಮಾರ್ಚ್ 22 ರವರೆಗೆ ವೈಭವದಿಂದ ತಿರುಮಲೆ ತಿರುಪತಿ ತಾಳ್ಲಪಾಕಗಳಲ್ಲಿ ನಡೆದವು.

16 ರಂದು ಶನಿವಾರ ತಿರುಪತಿ ತಿರುಮಲೆಗಳಲ್ಲಿ ನಗರ ಸಂಕೀರ್ತನೆಯಿಂದ ಉತ್ಸವಗಳು ಆರಂಭವಾದವು. ಸುಮಾರು 40 ಕ್ಕೂ ಹೆಚ್ಚಿನ ಭಜನ ವೃಂದಗಳು ತಿರುಮಲೆಯಲ್ಲಿನ ನಗರ ಸಂಕೀರ್ತನೆಯಲ್ಲಿ ಅಹೋಬಿಲಮಠದ ಪೀಠಾಧಿಪತಿ ಶ್ರೀ ಶ್ರೀ ನಾರಾಯಣ ಯತೀಂದ್ರ ಮಹಾದೇಶಿಕರ್ ಹಾಗೂ ತಿ.ತಿ.ದೇ., ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಮುನ್ನಡೆದಂತೆ, ಶ್ರೀಮಲೆಯಪ್ಪಸ್ವಾಮಿ ಉಭಯ ದೇವಿಯರೊಡನೆ ಬೀದಿ ಮೆರವಣಿಗೆಯಲ್ಲಿಬರುತ್ತಿರಲು, ಅನ್ನಮಾಚಾರ್ಯರೊಡನೆ ಸೇರಿ ತಿರುಮಲೆಯ ನಾರಾಯಣಗಿರಿಯ ಉದ್ಯಾನವನಕ್ಕೆ ಒಂದು ಸೇರಿದರು. ಅಲ್ಲಿನ ವಿಶೇಷ ಮಂಟಪದಲ್ಲಿ ಸ್ವಾಮಿ ಉಭಯ ದೇವಿಯರೊಡನೆ ಉಯ್ಯಾಲೆಯಲ್ಲಿ ಕುಳಿತಿರುವಂತೆ ಅನ್ನಮಾಚಾರ್ಯರ ಎರಡೂವರೆ ಅಡಿ ಎತ್ತರದ ಪಂಚಲೋಹ ವಿಗ್ರಹವನ್ನು ಅವರ ಮುಂದೆ ಇರಿಸಲಾ















ಯಿತು. ಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯದ ಪ್ರಾಚಾರ್ಯ ಪ್ರಪಂಚಂ ಸೀತಾರಾಮ್ ಅವರು ಅನ್ನಮಾಚಾರ್ಯರ ವೇಷವನ್ನು ತೊಟ್ಟು ನಗರ ಸಂಕೀರ್ತನೆಯಲ್ಲಿ ಭಾಗವಹಿಸಿದ್ದರು. ನಗರ ಸಂಕೀರ್ತನೆಗಾಗಿಯೇ ಸಪ್ತಗಿರಿ ಕೀರ್ತನೆಗಳನ್ನು ಸಿದ್ಧಗೊಳಿಸಲಾಗಿದ್ದಿತು. ಅವನ್ನು ವಿಖ್ಯಾತ ವಿದ್ವಾಂಸರು ಹಾಡುತ್ತ ನಡೆದ ಸೊಬಗೇ ಸೊಬಗು. ನಾರಾಯಣ ಗಿರಿಯ ಉದ್ಯಾನವನದಲ್ಲಿ ಕಂಚಿಕಾಮಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಗಳು, ಅಹೋಬಿಲ ಪೀಠಾಧಿಪತಿಗಳು, ತಿರುಮಲೆಯ ಪೆದ್ದ ಜೀಯಂಗಾರ್, ಚಿನ್ನಜೀಯಂಗಾರ್, ಸಮಕ್ಷಮದಲ್ಲಿ ಉತ್ಸವಗಳು ಆರಂಭವಾದವು. ಸಂಗೀತ ವಿದ್ವಾಂಸರುಗಳಾದ ಶ್ರೀ ನೂಕಲ ಚಿನ ಸತ್ಯನಾರಾಯಣ, ಟ್ರಿಚೂರ್ ಶ್ರೀ ವಿ. ರಾಮಚಂದ್ರನ್, ಶ್ರೀಮತಿ ಮಣಿಕೃಷ್ಣಸ್ವಾಮಿ, ಶ್ರೀ ಎಂ. ಎಸ್. ಬಾಲಸುಬ್ರಹ್ಮಣ್ಯಶರ್ಮ, ಶ್ರೀಮತಿ ಚಾರುಮತಿ ರಾಮಚಂದ್ರನ್, ಶ್ರೀ ಕಲ್ಲೂರಿ ಮುರಳೀಕೃಷ್ಣ, ಪುದುಕೋಟೈ ಶ್ರೀ ಆರ್. ಕೃಷ್ಣ ಮೂರ್ತಿ - ಮೊದಲಾದವರು ಸ್ವಾಮಿಗೆ ಸಂಕೀರ್ತನ ಸೇವೆಯನ್ನು ಅರ್ಪಿಸಿದರು.

ತಿರುಮಲೆಯಲ್ಲಿ ಮೂರುದಿನಗಳು ಮಾತ್ರವೇ ಕಾರ್ಯಕ್ರಮಗಳು ನಡೆದುವಾದರೆ ತಿರುಪತಿಯಲ್ಲಿ ಒಂದು ವಾರ ಕಾಲ ಕಾರ್ಯಕ್ರಮಗಳು ನಡೆದವು. ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಶ್ರೀ ಗರಿಮೆಳ್ಳ ಬಾಲಕೃಷ್ಣಪ್ರಸಾದ್, ಶ್ರೀ ಮುದಿವರ್ತಿ ಕೊಂಡಮಾಚಾರ್ಯ, ಶ್ರೀ ಜೂಲಕಂಟಿ ಬಾಲಸುಬ್ರಹ್ಮಣ್ಯಂ, ಪ್ರೊ|| ಕೆ. ಸರ್ವೋತ್ತಮರಾವು, ಡಾ|| ಜಿ. ಚಲಪತಿ, ಶ್ರೀ ಎ. ಗೋಪೀನಾಥ್, ಆಚಾರ್ಯ ಶ್ರೀ ಜೆ.ವಿ. ಸುಬ್ರಹ್ಮಣ್ಯಂ ಮೊದಲಾದವರು ವಿದ್ವತ್ಪೂರ್ಣವಾಗಿ ಅನ್ನಮಾಚಾರ್ಯ ಸಾಹಿತ್ಯದಲ್ಲಿನ ವಿವಿಧಾಂಶಗಳನ್ನು ವಿವರಿಸಿದರು. ಹರಿಕಥೆ, ಸಂಗೀತಗಳ ನಡೆದವು. ಸಮಾಪನೋತ್ಸವದಲ್ಲಿ ಮಾತನಾಡುತ್ತ ಅನ್ನಮಾಚಾರ್ಯ ಕೀರ್ತನ ಪದಕೋಶವನ್ನು ಹೊರತರುವ ಯೋಜನೆಯಿದೆಯೆಂದು ಕಾರ್ಯನಿರ್ವಹಣಾಧಿಕಾರಿಯವರು ನುಡಿದರು.

ತಾಳ್ಲಪಾಕ ಅನ್ನಮಾಚಾರ್ಯರ ಹುಟ್ಟಿದೂರು. ಅಲ್ಲಿ 16-3-96 ರಂದು ಅನ್ನಮಾಚಾರ್ಯರ ಪಟದ ಮೆರವಣಿಗೆಯಿಂದ ವರ್ಧಂತಿ ಉತ್ಸವ ಆರಂಭವಾಗಿ, ಅಂದು ಸಂಜೆ ಶ್ರೀಕೃಷ್ಣರಾಯಭಾರ ನಾಟಕ ನಡೆಯಿತು. 17-3-96 ರಂದು ಶ್ರೀಮತಿ ಭಾಸ್ಕರ ಭ್ರಮರಾಂಬ ಅವರ ಸಂಗೀತ, ಶ್ರೀ ವೈ. ವೆಂಕಟೇಶ್ವರುಲು ಅವರ ಶ್ರೀನಿವಾಸ ಕಲ್ಯಾಣ ಹರಿಕಥೆ ನಡೆಯಿತು. ಹೆಚ್ಚಿನ ಮಂದಿ ನೆರೆದು ಉತ್ಸವವನ್ನು ಯಶಸ್ವಿಗೊಳಿಸಿದರು.



## ಯಶಸ್ವಿಯಾದ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವಗಳು

ತಿರುಪತಿಯ ಕೋದಂಡರಾಮಸ್ವಾಮಿ ಆಲಯದಲ್ಲಿನ ವಾರ್ಷಿಕ ಬ್ರಹ್ಮೋತ್ಸವಗಳು ಮಾರ್ಚ್ 18 ರಂದು ಸೋಮವಾರ ಬೆಳಗ್ಗೆ ಧ್ವಜಾರೋಹಣದಿಂದ ಆರಂಭವಾಗಿ 26 ರಂದು ಧ್ವಜಾವರೋಹಣ ದೊಡನೆ ಮುಕ್ತಾಯವಾಯಿತು. ಜೊತೆಗೇ ಮಾರ್ಚ್ 28 ರಿಂದ 30 ವರೆಗೆ ಶ್ರೀರಾಮನವಮಿ ಉತ್ಸವಗಳೂ ನಡೆದು ಆಲಯ ಹಿಂದೆಂದೂ ಇಲ್ಲದಂತಹ ಜನವನ್ನೂ ಆಕರ್ಷಿಸಿದ್ದಿತು.

ಎಲ್ಲ ದೇವಸ್ಥಾನಗಳ ವಾರ್ಷಿಕ ಬ್ರಹ್ಮೋತ್ಸವಗಳು ಮೇಲಿನ ಸ್ತರದಲ್ಲಿ, ಹೆಚ್ಚು ಜನಾಕರ್ಷಕವಾಗುವಂತೆ ಆಗದೇಕು ಎಂಬ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರ ಅಪೇಕ್ಷೆಯಂತೆ ಅವರ ಮೇಲು ವಿಚಾರಣೆಯಲ್ಲಿ ಆನಂದದಾಯಕವಾಗಿ ನಡೆದ ಬ್ರಹ್ಮೋತ್ಸವಗಳಲ್ಲಿ ಊರೆಲ್ಲ ಅಲಂಕಾರಗೊಂಡು ಹಬ್ಬದ ಸಾಲು ಹರಿಯುತ್ತಿದೆಯೋ ಎಂಬಂತೆ ಕಂಡುಬಂದಿತು. ಪ್ರಮುಖ ಸ್ಥಳಗಳಲ್ಲಿ ಸ್ವಾಗತ ತೋರಣ, ಕಮಾನುಗಳು, ಮಾಡವೀಧಿಗಳಲ್ಲಿ ವಿದ್ಯುದ್ದೀಪಾಲಂಕಾರ, ಪುಷ್ಪಾಲಂಕಾರಗಳು ಆಕರ್ಷಕವಾಗಿದ್ದವು. ಮುಖ್ಯವಾಗಿ ಮಧ್ಯದಲ್ಲಿ ಯುಗಾದಿ ಮಾರ್ಚ್ ಇಪ್ಪತ್ತರಂದು ಮುತ್ತಿನ ಪಲ್ಲಕಿ, ವಾಹನ ಊರಿನಲ್ಲಿ ಮೆರವಣಿಗೆ ಬಂದಾಗ ಅಸಂಖ್ಯ ಜನ ನೆರೆದಿದ್ದರು. 22 ರಂದು ಸ್ವಾಮಿ ಗರುಡೋತ್ಸವದಲ್ಲಿದ್ದದ್ದನ್ನು ಭಕ್ತರು ಆನಂದೋತ್ಸಾಹಗಳಿಂದ ತಮ್ಮ ಬೀದಿಗಳಿಗೆ, ಮನಗಳಿಗೆ ಬರಮಾಡಿಕೊಂಡರು. 23 ರಂದು ರಥೋತ್ಸವ ವೈಭವದಿಂದ ನಡೆಯಿತು.

ದಿನವೂ ಬೆಳಗ್ಗೆ ಸಂಜೆಗಳ ಉತ್ಸವ ವಾಹನಗಳ ಮೆರವಣಿಗೆಯೇ ಅಲ್ಲದೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಹೆಚ್ಚಿನ ಜನವನ್ನು ಆಕರ್ಷಿಸಿದ್ದು ಕಂಡುಬಂದಿತು. ದೇವಾಲಯದ ಸುತ್ತ ಇಡೀ ಬ್ರಹ್ಮೋತ್ಸವಗಳ ದಿನಗಳಲ್ಲಿ ಜಾತ್ರೆಯ ವಾತಾವರಣ, ಭಕ್ತಿ ಪ್ರಪತ್ತಿಗಳ ವಾತಾವರಣ ನಿರ್ಮಾಣವಾಗಿದ್ದಿತು.

ಶ್ರೀರಾಮನವಮಿ ಉತ್ಸವಗಳು 28 ರಂದು ಆರಂಭವಾಗಿ 29 ರಂದು ಸೀತಾರಾಮ ಕಲ್ಯಾಣ ಮಹೋತ್ಸವ ಬಹುವೈಭವದಿಂದಲೂ, ಉತ್ಸಾಹದಿಂದಲೂ ನಡೆಯಿತು. ಕಲ್ಯಾಣದ ನಂತರ ದೇವ, ದೇವಿಯರನ್ನು ಊರಿನ ದೊಡ್ಡಬೀದಿಗಳಲ್ಲಿ ಮೆರವಣಿಗೆಯಲ್ಲಿ ಕರೆತರಲಾಯಿತು. ಈ ಉತ್ಸವದಲ್ಲಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿಯವರು ರನ್ನಿಂಗ್ ಕಾಮೆಂಟರಿಯನ್ನೂ ನೀಡಿದರು. ತಿ.ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣರಾವ್ ಮೊದಲಾದವರೂ ಭಾಗವಹಿಸಿದ್ದ ಕಲ್ಯಾಣೋತ್ಸವದಲ್ಲಿ 229 ಮಂದಿ ಗೃಹಸ್ಥರು 250-00 ರೂ. ಆರ್ಜಿತಸೇವಾಶುಲ್ಕ ನೀಡಿ, ಸಂಕಲ್ಪ ಪಡೆದು ಪಾಲ್ಗೊಂಡಿದ್ದರು. ತಿ.ತಿ.ದೇ. ವಿದ್ಯುತ್ ವಿಭಾಗದವರು ಜನರು ನಿಂತಲ್ಲಿಂದಲೇ ಕಲ್ಯಾಣೋತ್ಸವವನ್ನು ವೀಕ್ಷಿಸಲು ಅನುಕೂಲವಾಗುವಂತೆ ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ. ಯನ್ನು ಏರ್ಪಡಿಸಿದ್ದರು.





## ಕಪಿಲತೀರ್ಥದಲ್ಲಿ ಅಭಿಷೇಕಸೇವೆ ಆರಂಭ

ತಿರುಪತಿಯ ಕಪಿಲತೀರ್ಥದಲ್ಲಿ ದಿನವೂ ನಡೆಯುವ ಅಭಿಷೇಕ ಸೇವೆಯನ್ನು ಆರ್ಜಿತಸೇವೆಯನ್ನಾಗಿ ಪ್ರವೇಶಗೊಳಿಸಿದೆ. ಅಭಿಷೇಕಸೇವೆಯಲ್ಲಿ ಪಾಲ್ಗೊಳ್ಳುವ ಗೃಹಸ್ಥರು 50 ರೂಗಳ ಆರ್ಜಿತ ಸೇವಾಶುಲ್ಕವನ್ನು ಬೆಳಗ್ಗೆ 7 ಗಂಟೆಯ ಒಳಗೆ ಸಲ್ಲಿಸಬೇಕು. ಅಭಿಷೇಕಾನಂತರ ಸೇವೆಯಲ್ಲಿ ಅವರಿಗೆ ಅರ್ಚನೆ ಆರತಿಗಳನ್ನು ನೀಡಲಾಗುವುದು ಎಂದು ತಿಳಿಸಲಾಗಿದೆ.

## ತಿರುಮಲೇಶನಿಗೆ ಹೀರೋ ವಿನ್ನರ್

ಹೀರೋ ಮೋಟಾರ್ಸ್ ನವರು ಹೊಸದಾಗಿ ತಯಾರಿಸಿದ ಹೀರೋ ವಿನ್ನರ್ - ದ್ವಿಚಕ್ರವಾಹನವನ್ನು ಶ್ರೀ ವೆಂಕಟೇಶ್ವರಸ್ವಾಮಿಗೆ ಕಾಣಿಕೆಯನ್ನಾಗಿ ಅರ್ಪಿಸಿದ್ದಾರೆ. ಸ್ವಾಮಿಯ ಆಲಯದ ಎದುರಿಗೆ ವಿಶೇಷ ದರ್ಜೆಯ ಡೆ.ಇ.ಓ. ಅವರಿಗೆ ಹೀರೋ ಮೋಟಾರ್ಸ್‌ನ ದಕ್ಷಿಣ ಪ್ರಾಂತದ ಜನರಲ್ ಮ್ಯಾನೇಜರ್ ಶ್ರೀ ಎ. ದೋಸ್‌ಸ್ಲೆ ಅವರು ಇದನ್ನು ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ನೀಡಿದರು.



## ಸ್ವಾಮಿ ಸೇವೆಯಲ್ಲಿ ತಮಿಳುನಾಡು ಮುಖ್ಯಮಂತ್ರಿ

ತಮಿಳುನಾಡಿನ ಮುಖ್ಯಮಂತ್ರಿ ಕುಮಾರಿ ಜಯಲಲಿತ ಅವರು ಮಾರ್ಚ್ 31 ರ ಭಾನುವಾರ ತಿರುಮಲೆಗೆ ಆಗಮಿಸಿ ಸ್ವಾಮಿಯ ಸೇವೆ ಮಾಡಿದರು.

ತಿರುಮಲೆಯಲ್ಲಿ ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದ ಅಧಿಕಾರಿಗಳು ಸ್ವಾಗತಿಸಿದರು. ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ಆಲಯವನ್ನು ಸೇರಿದ ಮುಖ್ಯಮಂತ್ರಿಗಳಿಗೆ ಆಲಯದಲ್ಲಿ ಆರತಿ ನೀಡಿ ಸ್ವಾಮಿ ವೈಭವವನ್ನು ವಿವರಿಸಲಾಯಿತು. ರಂಗನಾಯಕ ಮಂಟಪದಲ್ಲಿ ಮುಖ್ಯಮಂತ್ರಿಗಳಿಗೆ ವೇದಾಶೀರ್ವಚನ ನೀಡಲಾಯಿತು. ಕಾರ್ಯನಿರ್ವಹಣಾಧಿಕಾರಿಗಳು ಸ್ವಾಮಿಯ ಪ್ರಸಾದವನ್ನು ಮುಖ್ಯ ಮಂತ್ರಿಗಳಿಗೆ ನೀಡಿದರು.

## ಮುಂಗಡ ಪತ್ರ ಆದಾಯ 218.13 ಕೋಟಿ

1996 - 97 ರ ಸಾಲಿನಲ್ಲಿ ತಿ. ತಿ. ದೇವಸ್ಥಾನಗಳ ಒಟ್ಟು ಆಯ - 218.13 ಕೋಟಿ ರೂ.ಗಳೂ, ವೆಚ್ಚ 194.49 ಕೋಟಿ ರೂ.ಗಳೂ ಆಗಿರುವುದೆಂಬ ಮುಂಗಡ ಪತ್ರವನ್ನು ತಿ.ತಿ.ದೇ. ಧರ್ಮಕರ್ತರ ಮಂಡಳಿ ಹೈದರಾಬಾದಿನಲ್ಲಿ ಮಾರ್ಚ್ 25 ರಂದು ಸಭೆ ಸೇರಿ ಅಂಗೀಕರಿಸಿದೆ.

1995 - 96 ರ ಅಂದಾಜು ಪತ್ರದಲ್ಲಿ 194.97 ಕೋಟಿ ರೂ.ಗಳ ಒಟ್ಟು ಆದಾಯದ ಮುಂಗಾಣ್ಕೆ ಇದ್ದು, ಇದು 217.67 ಕೋಟಿ ರೂ.ಗಳಿಗೆ ಎಂದರೆ 22.7 ಕೋಟಿ ರೂಪಾಯಿಗಳ ಹೆಚ್ಚಳವನ್ನು ಮುಟ್ಟಿದೆ. ಹಾಗೆಯೇ ವೆಚ್ಚಗಳನ್ನು 182.13 ಕೋಟಿ ರೂ.ಗಳೆಂದು ಅಂದಾಜಿಸಿದ್ದರೂ ಇದನ್ನು 175.8 ಕೋಟಿ ರೂಪಾಯಿಗಳಿಗೆ ಸೀಮಿತಗೊಳಿಸಿದ್ದರಿಂದ ಒಟ್ಟು 6.88 ಕೋಟಿ ರೂಪಾಯಿಗಳ ಉಳಿತಾಯವಾಗಿದೆ.

ಅಂದಾಜಿಸಿದ ಆಯವಾದ 218.13 ಕೋಟಿ ರೂಗಳಲ್ಲಿ ಹುಂಡಿಯಿಂದ ಬರತಕ್ಕ ಆದಾಯ 85.81 ಕೋಟಿ ರೂ.ಗಳೆಂದೂ, ಆರ್ಜಿತ ಸೇವೆಗಳ ಮೂಲಕ 23 ಕೋಟಿ ರೂಗಳೆಂದೂ, ಪ್ರಸಾದ ಮಾರಾಟದಿಂದ 11.8 ಕೋಟಿ ರೂಗಳೂ, 30 ರೂಗಳ ವಿಶೇಷ ಪ್ರವೇಶದ ಟಿಕೆಟ್‌ಗಳಿಂದ 14.81 ಕೋಟಿ ರೂಪಾಯಿಗಳೆಂದೂ, ಕಾಟೇಜು, ಅತಿಥಿ ಗೃಹಗಳ ನಿರ್ಮಾಣದಲ್ಲಿ ಬರತಕ್ಕ ದಾನಗಳು 4 ಕೋಟಿ ರೂಗಳೆಂದೂ ಅಂದಾಜು ಮಾಡಲಾಗಿದೆ.

ವೆಚ್ಚಗಳ ಬಾಬತ್ತಿನಲ್ಲಿ 60 ಕೋಟಿ ರೂಪಾಯಿಗಳು ಸಿಬ್ಬಂದಿ ಸಂಬಳವೆಂದೂ, 6.43 ಕೋಟಿ ರೂಗಳು ಉದ್ಯೋಗಿಗಳ ಆರೋಗ್ಯ ಶಿಕ್ಷಣದ ವೆಚ್ಚಗಳೆಂದೂ 40.52 ಕೋಟಿ ರೂಪಾಯಿಗಳು ವಿವಿಧ ಯೋಜನೆ, ಸಂಸ್ಥೆಗಳಿಗಾಗಿ ನೀಡಲಾಗುವ ವೆಚ್ಚವೆಂದೂ ಹೇಳಲಾಗಿದೆ. ಮರಮ್ಮತ್ತು ಕೆಲಸಗಳಿಗಾಗಿ 2.61 ಕೋಟಿ ರೂಗಳನ್ನು ನೀಡಲಾಗಿದೆ.

## ಹಾರ್ದಿಕ ವಿದಾಯ

ತಿರುಮಲೆ ತಿರುಪತಿ ದೇವಸ್ಥಾನಗಳ ಮುದ್ರಣಾಲಯದಲ್ಲಿ ಕೆಲಸ ಮಾಡುತ್ತ ಬೈಂಡರ್‌ಗಳಲ್ಲಿ ಕಲೆಗಾರರೆಂದೇ ಹೆಸರು ಪಡೆದ ಶ್ರೀ ಜೆ. ಕೋಯಿಲ್ ಪಿಳ್ಳೈ ಅವರು ಪದವಿ ನಿವೃತ್ತರಾದಾಗ (29-2-96 ರಂದು) ಅವರಿಗೆ ಹಾರ್ದಿಕವಾಗಿ ಬೀಳ್ಕೊಡುಗೆ ನೀಡಲಾಯಿತು. ಸಪ್ತಗಿರಿ ಸಂಪಾದಕ ಶ್ರೀ ಎನ್. ಎಸ್. ರಾಮಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಮುದ್ರಣಾಲಯದ ಮ್ಯಾನೇಜರ್ ಶ್ರೀ ಎಂ. ಮೋಹನ್‌ರಾವ್ ಅವರು ಶ್ರೀಯುತರನ್ನು ಸನ್ಮಾನಿಸಿದರು. ಹಲವರು ಮಾತನಾಡಿ ಶ್ರೀ ಕೋಯಿಲ್‌ಪಿಳ್ಳೈ ಅವರ ನಿವೃತ್ತ ಜೀವನ ಸುಖಕರವಾಗಿ ಸಾಗಲಿ ಎಂದು ಹಾರೈಸಿದರು. ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ನೀಡಲೆಂದು ಶ್ರೀ ವೆಂಕಟೇಶ್ವರ ಸ್ವಾಮಿಯಲ್ಲಿ ಸಪ್ತಗಿರಿ ಪ್ರಾರ್ಥಿಸುತ್ತದೆ.

## ಉದ್ಯೋಗಿಯ ಪ್ರಾಮಾಣಿಕತೆ

ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸೆಕ್ಯೂರಿಟಿ ಗಾರ್ಡ್ ಶ್ರೀ ರಾಜರತ್ನಂ ಅವರಿಗೆ ಭಾನುವಾರ ಮಾರ್ಚ್ 11 ರಂದು ಒಂದು ರತ್ನಗಳನ್ನು ಹುದುಗಿಸಿದ್ದ ಬಂಗಾರದ ಕೈಬಳೆ ದೊರೆತಿದ್ದು ಅದನ್ನು ಆತ ವಿಜಿಲೆನ್ಸ್ ಸೆಕ್ಯೂರಿಟಿ ಅಧಿಕಾರಿ ಶ್ರೀ ಜನಾರ್ಧನ್ ಅವರಿಗೆ ಒಪ್ಪಿಸಿ, ಧ್ವನಿವರ್ಧಕದ ಮೂಲಕ ಅದರ ಬಗ್ಗೆ ವಿಷಯ ಪ್ರಸಾರಗೊಳಿಸಿ ಅದರ ಒಡೆಯರಿಗೆ ಅದನ್ನು ಒಪ್ಪಿಸಿದ ಘಟನೆ ಬೆಳಕಿಗೆ ಬಂದಿದೆ. ದೊಂಬಾಯಿನ ಶ್ರೀ ಆನಂದ್ ಜೈನ್ ಅವರ ಈ ಕೈಬಳೆಯ ಬೆಲೆ ಎರಡು - ಮೂರು ಲಕ್ಷ ರೂಗಳೆಂದು ಹೇಳಲಾಗಿದೆ. ಉತ್ತಮ ಪ್ರಾಮಾಣಿಕತೆಯ ಕರ್ತವ್ಯ ನಿರ್ವಹಣೆಯ ಮೆಚ್ಚುಗೆಯಾಗಿ ಶ್ರೀ ರಾಜರತ್ನಂ ಅವರಿಗೆ 200 ರೂ.ಗಳ ಬಹುಮಾನ ತಿ.ತಿ.ದೇ. ನೀಡಿದೆ.



## ಸೂಚನೆ

ತಿ. ತಿ. ದೇ. ಮುದ್ರಣಾಲಯದಲ್ಲಿ ಸಂಭವಿಸಿರುವ ಯಾಂತ್ರಿಕ ತೊಂದರೆಗಳಿಂದಾಗಿ ಸಪ್ತಗಿರಿ ಮಾಸಪತ್ರಿಕೆ ತಡವಾಗುತ್ತಿದೆ. ಒಂದೆರಡು ತಿಂಗಳುಗಳಲ್ಲಿ ಈ ತಡವನ್ನು ಸರಿಪಡಿಸಲಾಗುವುದು. ವಾಚಕರು, ಏಜೆಂಟರು ಸಹಕರಿಸಬೇಕೆಂದು ಕೋರಲಾಗಿದೆ.

**ಸಂಪಾದಕರು**

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

